ಶ್ರೀರಾಮಂ

ಕರ್ಣಾಟಕ

# ಯಯಾತಿನಾಟಕಂ.

ಹಲಕೂರು ( ಅಲಕಪುರಿ )

ಶಾ॥ ವೆಂಕಟರಮಣಯ್ಯನವರಿಂದ

ವಿರಚಿಸಲ್ಪಟ್ಟುದು.

೧೯೧೩.

ಬೆಳಗಾಂವಿಯಲ್ಲಿ

ಡಿ. ಪಿ. ಚೌಗುಲೆ, ಇವರ

“ ಶ್ರೀ ಮಹಾವೀರ ” ಮುದ್ರಣಾಲಯದಲ್ಲಿ

ಮುದ್ರಿಸಲ್ಪಟ್ಟಿತು.



ಶ್ರೀರಾಮಂ

# ಪೀಠಿಕೆ.

ಇದರ ಕಥಾಂಶವು ಪ್ರಸಿದ್ಧವಾದ "ಭಾರತ"ದಿಂದ ಉದ್ಧೃತವಾದುದೆಂಬ ಅಂಶವನ್ನು ವಾಚಕರೆಲ್ಲರೂ ಬಲ್ಲರು. ಈಗ್ಗೆ ಮೊದಲೇ ಈ ಚರಿತ್ರೆಯು ಪ್ರಾಕೃತ ನಾಟಕರೂಪದಲ್ಲಿ "ಯಯಾತಿ ಚರಿತ್ರಂ" ಎಂಬ ಹೆಸರಿನಿಂದ ನನ್ನಿಂದಲೇ ರಚಿಸಲ್ಪಟ್ಟು ನಮ್ಮ ವಾಚಕರಿಗೆ ಅರ್ಪಿಸಲ್ಪಟ್ಟಿರುವುದಷ್ಟೆ? ನೂತನ ರೀತಿಯ ರೂಪಕದಂತೆ ರಚಿಸಬೇಕೆಂದು ನನ್ನ ಆಪ್ತರನೇಕರು ಅಪೇಕ್ಷಿಸಿದುದರಿಂದ ಯಥಾಮತಿಯಾಗಿ ಇದನ್ನು ವಿರಚಿಸಿದುದಾಯಿತು.

ವೃ॥ ಸಕಲಗುಣಾನ್ವಿತಂ ಸುಕೃತದಂ ಸರಸಂ ಜನಸಮ್ಮತಂ ಬುಧ ।
ಪ್ರಕರಸುಸೇವ್ಯಮೆಂದುಮಿಗೆ ಬಣ್ಣಿಸಲಾಂ ಫಲಮೇಂ ವಿಚಕ್ಷಣರ್ ॥
ಅಕಲಿತದೋಷಮೆಂದೊಡೆಮದಲ್ತೆಫಲಂ? ಸುತೆಭರ್ತೃಸದ್ಮದೊಳ್ ।
ಪ್ರಕಟಿತಶೀಲೆಸದ್ಗುಣಿನಿಯಾಗಲದೇ ಜನಕಂಗೆಮೋದದಂ ॥

ಎಂಬ ಸರ್ವ ಜನಾನುಮೋದನೀಯವಾದ ಸನ್ನೀತಿಯಂತೆ ಪಂಡಿತಮಂಡಲಿಗರ್ಪಿಸಿದೆನು.

ಬ್ರಹ್ಮಶ್ರೀ. ಬಿ. ಆರ್. ಶ್ರೀನಿವಾಸಾಚಾರ್ಯರವರು ಸಾಹಿತ್ಯವಿದ್ವಾನ್ ಮತ್ತು ಕವಿರತ್ನಂ (ಬಾಗೇಪಲ್ಲಿ, ಸಂಸ್ಕೃತ ಪಾಠಶಾಲಾಧ್ಯಾಪಕರು).

,, ಗ. ವೈ. ಕೃಷ್ಣಾಚಾರ್ಯರವರು (ಬೆಂಗಳೂರು, ಸೆಂಟ್ರಲ್ ಕಾಲೇಜು ಸೀನಿಯರ್ ಕನ್ನಡ ಪಂಡಿತರು).

,, ಸಿದ್ಧಾಂತಿ, ಶಿವಶಂಕರ ಶಾಸ್ತ್ರಿಗಳವರು (ಮದರಾಸು, ಪ್ರೆಸಿಡೆನ್ಸಿ ಕಾಲೇಜು ಪಂಡಿತರು).

,, ನಂಜನಗೂಡು, ಶ್ರೀಕಂಠಶಾಸ್ತ್ರಿಗಳವರು (ಮೈಸೂರು, ಆಸ್ಥಾನ ವಿದ್ವಾನ್).

ಮ. ರಾ. ಶ್ರೀ. ಹೆಚ್. ವೆಂಕಟರಾಯರು ಕರ್ಣಾಟಕ ಕವಿರಾಜಂ (ಹೊನ್ನಡಿಕೆ, ಗೌರ್ನಮೆಂಟ ಸ್ಕೂಲ್ ಹೆಡ್ಮಾಸ್ಟರ್).

ಇವರುಗಳು ವಿಶ್ವಾಸವಿರಿಸಿ, ಪರಿಷ್ಕರಿಸಿ, ತಮ್ಮ ಅಭಿಪ್ರಾಯಗಳನ್ನು ಸೂಚಿಸಿ, ಸಹಾಯ ಮಾಡಿದುದಕ್ಕಾಗಿ ಇವರುಗಳಿಗೆ ಅತ್ಯಂತ ಕೃತಜ್ಞನಾಗಿರುವೆನು.

ಮತ್ತೂ ಈ ಗ್ರಂಥವನ್ನು ನಮ್ಮನ್ನಾಳುವ ಶ್ರೀ ಮೈಸೂರು ಸಂಸ್ಥಾನದ ಮಹಾರಾಜರವರಾದ ಶ್ರೀಮತ್ಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ,ಯವರ ಸಹೋದರರಾದ ಶ್ರೀಮನ್ಯುವರಾಜ ಶ್ರೀಮತ್ಕಂಠೀರವನರಸರಾಜ ಒಡೆಯರ್ ಬಹದ್ದೂರ್ರವರ ವಿವಾಹ ಮಹೋತ್ಸವದ ಸಂತೋಷಪ್ರದರ್ಶನಾರ್ಥವಾಗಿ ಪ್ರಕಟಿಸಿ ರಾಜಭಕ್ತಿಯನ್ನು ಪ್ರದರ್ಶಿಸಿ ಕೃತಕೃತ್ಯನಾಗಬೇಕೆಂಬ ನನ್ನ ಅಭಿಮತವನ್ನು ಅನುಮೋದಿಸಿ ಪ್ರೋತ್ಸಾಹಿಸಿದ ಶ್ರೀ ಮೈಸೂರು ಶ್ರೀಮನ್ಮಹಾರಾಜಾ ಸರಕಾರಕ್ಕೆ ಕೃತಜ್ಞನಾಗಿರುವೆನು. ಮತ್ತು;

ಕಂ|| ಗುಣಿಗಳ್ ದೋಷವ ತಿರ್ದಿಸು ।
ಗುಣದೊಳ್ ಬೆರೆಯಿಸುತೆ ಮುದವನೊಂದುವ್ರದುಳಿದಾ ||
ಗುಣದಲ್ಲಿಯೆ ದೋಷಾರೋ ।
ಪಣವೆಸಗುವ ಕುಜನರಂತೆ ವರ್ತಿಸರೆಂದುಂ ||

ಎಂಬುದಾಗಿ ನಂಬಿರುವ, ಸುಜನವಿಧೇಯ (ಗ್ರಂಥಕರ್ತ).

ಸಾಧಾರಣ ಆಷಾಢ ಶುಕ್ಲ
ಏಕಾದಶಿ ಸೋಮವಾರ,
೧೮-೭-೧೯೧೦.

ಶಾ. ವೆಂಕಟರಮಣಯ್ಯ,
ಹಲಕೂರು (ಅಲಕಪುರಿ).
ಗೋರೀಬಿದನೂರು ತಾಲ್ಲೂಕು.

———

ಇದು

ಶ್ರೀ ಮೈಸೂರು ಶೀಮೆಯ ಘನವನ್ನು ಹೊಂದಿದ ಯುವರಾಜರಾದ
ಶ್ರೀಮತ್ಕಂಠೀರವ ನರಸಿಂಹ ರಾಜಒಡೆಯರ್ ಬಹದ್ದೂರವರ
ವಿವಾಹಮಹೋತ್ಸವದ ಜ್ಞಾಪಕಾರ್ಥವಾಗಿ ಪ್ರಕಟಿಸಲ್ಪಟ್ಟು
ಶ್ರೀಮನ್ಮಹಾರಾಜ ಯುವರಾಜರುಗಳ ದಿವ್ಯ ಶ್ರೀ ಚರ
ಣಸನ್ನಿಧಾನಂಗಳಲ್ಲಿ ಅತ್ಯಂತ ವಿನಯ ರಾಜಭಕ್ತಿ
ಪುರಸ್ಸರವಾಗಿ ಗ್ರಂಥಕರ್ತನಿಂದ
ಅರ್ಪಿಸಲ್ಪಟ್ಟಿರುವದು.

ಶ್ರೀರಾಮಂ

ಯಯಾತಿ ನಾಟಕದ ವಿಷಯದಲ್ಲಿ ಪಂಡಿತರ ಅಭಿಪ್ರಾಯಗಳು

೧

(೧). ನಯನೀತಿ ಧರ್ಮಬೋಧಕ । ಯಯಾತಿಚರಿತಾಖ್ಯನಾಟಕಂ ಕನ್ನಡಿಗರ್ ॥

ಸ್ವಯಮಾದರಿಸಲ್ಕಾಯ್ತಾ । ರಯೆವೇಂಕಟರಮಣಯಾರ‍್ಯಕವಿಗಂಜಯದಂ ॥

(೨). ಸಕ್ಕದದಿಂ ಪರಿವರ್ತಿತ । ಮಿಕ್ಕುಮನೇಕಂ ಸುರೂಪಕಂಗಳ್ ಸ್ವಯಮಾ ॥

ಗಕ್ಕರೆಯಿಂ ರಚಿತಮಿದುಂ । ಮೊಕ್ಕಳಮಾನಂದಮೀಯದಿರದೆಲ್ಲರ್ಗಂ

(೩). ಗುಣಗಣಗವೇಷಣ ಪರ । ರ್ಗಣಿಯರ ಮಾನಂದಮೀವುದೊಳ್ಗಬ್ಬಂದು ॥

ರ್ಗ್ಗಣಿಗದುವೆ ದೂಷ್ಯಮೆನೆ ಕವಿ । ತಣಿಪಿಂ ಪ್ರಕಟಿಸುಗೆ...ಯೆೞಿಬೆಂ ॥

ಬ್ರಹ್ಮಶ್ರೀ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳವರು.
ಪ್ರೆಸಿಡೆನ್ಸಿ ಕಾಲೇಜು, ಪಂಡಿತರು ಮದರಾಸು
27-8-1908.

೨.

ಆದ್ಯಂತವಾಗಿ ಈ ಯಯಾತಿ ನಾಟಕವನ್ನು ಓದಿದೆನು. ಗ್ರಂಥಕರ್ತರು ಸ್ವಯಮೇವ ವಿಷಯಗಳನ್ನು ಸಂಗ್ರಹಿಸಿ, ರಸವತ್ತಾಗಿ ರಚಿಸಿರುವರು. ನಾಟಕಾಂಗ ಯೋಗ್ಯವಾದ "ಪ್ರಸ್ತಾವನೆ-ವಿಷ್ಕಂಭ" ಇತ್ಯಾದಿ ಮರ್ಯಾದೆಗಳು ಶಾಸ್ತ್ರಾನುಸಾರವಾಗಿವೆ. ನಾಟಕ ಪಠನಾನಂದಕ್ಕೆ ಮುಖ್ಯ ಭೂತವಾದ ಸಂವಿಧಾನಗಳೂ ಕಾಲೋಚಿತವಾದ ರಸಂಗಳೂ ಚಮತ್ಕೃತವಾಗಿರುವುದರಿಂದ ಈ ನಾಟಕವು ಗ್ರಂಥಕರ್ತರ ಪ್ರತಿಭಾಶಕ್ತಿಯನ್ನು ಪ್ರಕಟಿಸುವುದು. ಇದು ಅನೇಕ ವಿದ್ವಾಂಸರಿಂದ ಅನುಮೋದಿಸಲ್ಪಟ್ಟು ನಿರ್ದುಷ್ಟವಾಗಿ ಪಠನ ಯೋಗ್ಯವಾಗಿದೆ ಮಧ್ಯೆ ಮಧ್ಯೆ ಉಚಿತವಾಗಿ ಪೇಳಿರುವ ಕೆಲ ಹಾಡುಗಳು ಸಂಗೀತ ಶಾಸ್ತ್ರಜ್ಞರ ಚಿತ್ತಾಕರ್ಷಣವಾಗಿವೆ ಅತ ಏವ ಈ ಗ್ರಂಥಕರ್ತರು ಕರ್ಣಾಟ ಕವಿಗಳಲ್ಲಿ ಪರಿಗಣನೀಯರಾಗಿದ್ದಾರೆ. ಇತಿ.

ಹೆಚ್. ವೆಂಕಟರಾಯಂ ಹೆಡ್ಮಾಸ್ಟರ್
ಹೊನ್ನುಡಿಕೆ 22-9-1908-

ಶ್ರೀರಾಮಂ

ಕರ್ನಾಟಕ

# ಯಯಾತಿ ನಾಟಕಂ.

## ಪ್ರಥಮಾಂಕಂ.

( ನಾಂದೀವೃತ್ತಂ. )

* ಶ್ರೀ ಮನ್ಮಂಗಳದೇವತಾ ಸುಹೃದಯಾಬ್ಜಾತಾರ್ಕನಾಗಿರ್ದುಮಂ ।
ತಾಮಾಚೆಲ್ವಿನ ಸತ್ಯಭಾಮೆಯೊಳ್ ಮೋದಂಗೊಳ್ಳೆ ಕೇಳ್ದಾರಮಾ ॥
ಸ್ತ್ರೀ ಮಾಣಿಕ್ಯ ಮತೀವಕೋಪದೊಳಿರಲ್ಕತ್ಯಂತ ಸಾನ್ತ್ವೋಕ್ತಿಯಿಂ ।
ಪೋಮಾಣಿನ್ನಿದನೆಂದು ಬೇಡಿದಲಕಗ್ರಾಮೇಶ ನೀಂಪಾಲಿಸೈ ॥ ೧ ॥

ಸೂತ್ರಧಾರಂ ( ಪ್ರವೇಶಿಸಿ, ಸಭೆಯು ಕಡೆನೋಡಿ. )

ಮಹನೀಯರಾದ ಈ ಸಭಾಸದರಿಂದ, ನೀತಿ ಪ್ರಧಾನವೂ ಆನಂದತರವೂ ಆಗಿರುವ ಆವುದಾದರೊಂದು ರೂಪಕಮನಭಿನಯಿಸಿ ಸಂತೋಷಪಡಿಸಬೇಕೆಂದು, ಆಜ್ಞಾಪಿಸಲ್ಪಟ್ಟಿರುವೆನಲ್ಲವೆ? ಒಳ್ಳೆಯದು! ಏತತ್ಕಾರ್ಯಪೂರ್ತಿಗೋಸುಗ ವಿಚಕ್ಷ

---

* ರಾಗಕಮಾಚ್, ಆದಿತಾಳ. ( ಶ್ರೀ ವೆಂಕಟೇಶವಿಠ ).

ಶ್ರೀಸುಂದರೀ ಮನೋಹರ ॥ ಪಲ್ಲ ॥ ಶೇಷಫಣಿವರಶಯನ । ದೋಷರಹಿತ ಸಚ್ಚರಿತ । ಕೇಶವಾಚ್ಯುತ ಘಣಿ । ಗಿರೀಶಗೃಹಹೃಷೀ । ಕೇಶಘನನಿಭ । ಭೂಸುರಾಂಗ, ಮುರಹರ ॥ ೧ ॥ ವಾರಿರುಹಸುನಾಭಹರಿ । ಸಾರಾಗಮವಿತತಿ ವಿನುತ । ಘೋರದುರಿತವ್ರತತಿಕುಠಾರ । ಅಪಾರ । ಚಾರುಗುಣಾಕೂಪಾರ ॥ ಶೌರಿಧರಾ । ಧಾರಧರಾ । ಕ್ರೂರಮುರಹರ ॥ ೨ ॥ ಜಲಜನಯನ ಸದಯ । ಅಲಕನಗರನಿಲಯ ॥ ಚಲವನುಳಿದು ಪೊರೆ । ಮಲಿನಾತ್ಮನೊ, ಸಲೆ ತುತಿಪೆನೊ, ಕಳೆಯೋ ॥ ಕಲುಷಂಗಳನೀಂ । ಲಲಿತದರ್ಶನ । ಇಳೆಯಧಿನಾಯಕ । ಕುಲೀನನೆ, ಆಲಂಪಿನಿಂ । ದಲಾರಯ್ಯೆ । ಬಲಾರಿನುತ ॥ ೩ ॥

ಣೆಯಾದ ಮತ್ತು ನನ್ನ ನೆರವಾದ ನಟಿಯನ್ನು ಕರೆಯುವೆನು. (ತೆರೆಯ ಕಡೆನೋಡಿ) ಆರ್ಯೆ ಅಲಂಕಾರ ವಿಧಾನವು ನೆರವೇರಿದ್ದರೆ ಇತ್ತ ಬರುವಳಾಗು! ( ಸ್ವಲ್ಪ ನಿದಾನಿಸಿ) ಪ್ರಿಯೆ! ತಡವೇಕೆ? ಏನು? ನನ್ನ ಮೇಲೆ ಕೋಪವೋ?

(ತೆರೆಯಲ್ಲಿ) ಕಂ|| ಪಿರಿಯರ ಶಾಸನ ಮರೆ ।
ತರಿಯದೆ ಮತ್ತೋರ್ವ ಸಖಿಯೊಳಾಂತ್ಯೆಮುದಮುಂ ||
ಅರಿವುದು ಕಾರಣವದುವೇ ।
ತರುಣಿಯವಳ್ ನಿನ್ನ ಮೇಲೆ ಕೋಪವನಾನಲ್ ||೨||

ಸೂ|| ಏನು? (ಎಂದು ನೋಡಿ) ಪಾರಿಪಾರ್ಶ್ವಕನೆ! ಇತ್ತ ಬರುವನಾಗು! ಆರ್ಯೆ ಕೋಪಮಾಡುವದಕ್ಕೆ ಕಾರಣವನ್ನು ಸರಿಯಾಗಿ ತಿಳಿಸು!

ಪಾರಿಪಾರ್ಶ್ವಕಂ|| (ಪ್ರವೇಶಿಸಿ) ಆರ್ಯನೆ! ನೀನು (ಪೂಜ್ಯರ) ಆಜ್ಞಾತಿಕ್ರಮಣ ವನ್ನು ಮಾಡಿದುದೇ ಕಾರಣವು!

ಸೂ|| ಆಹಾ! ಹಾಗೆಯೋ? ಪ್ರಿಯಂಕರಿಯಾದ ಆರ್ಯೆ ಕೋಪಿಸಿದರೆ ನನ್ನ ಅವ ಕಾರ್ಯಂಗಳು ತಾನೆ ಸಲಕ್ಷಣವಾಗಿ ನೆರವೇರುವುವು? ನನ್ನ ಮನಸ್ಸಿಗೂ ಸಂತೋಷವೆತ್ತಣದು?

ಕಂ|| ಬಾರೌ ಮನ್ಮಥನರಗಿಣಿ ।
ನೀರೇರುಹವಾಣಿ ನಾಗವೇಣೀ ತರುಣೀ ||
ನಾರೀ ಕೋಪಂದೊರೆ ಕೃತಿ ।
ಗೌರವದಿಂ ಕರವಮುಗಿದು ಬೇಳ್ಪೆಂ ನಿನ್ನಂ || ೩ ||

ಪಾರಿಪಾರ್ಶ್ವ|| ಆರ್ಯನೆ! ಪೂಜ್ಯನಾದ ನೀನು ಅಬಲೆಗೆ ಕೈಮುಗಿದು ಬೇಡುವುದೇ?

ಸೂತ್ರ||ಕಂ|| ಪೂತಾತ್ಮಂ ವಿಖ್ಯಾತಯ ।
ಯಾತಿನೃಪಂ ದೇವಯಾನೆಯಂ ಪ್ರಾರ್ಥಿಸಿದಾ ||
ರೀತಿಯನೇಂ ಕೇಳ್ದಿಲ್ಲಮೆ ।
ಭೂತಳಪತಿ ಯತ್ತಣಿಂದೆ ಮಿಗಿಲಪ್ಪೆನೆನಾಂ || ೪ ||

ಪಾರಿಪಾರ್ಶ್ವ|| ಓಹೋ! ಇದೇ ಯಯಾತಿನೃಪನ ಚರಿತ್ರೆಯನ್ನೇ ಅಲ್ಲವೇ? ನಾಳೆಯ ದಿನ ವಭಿನಯಿಸಿ ತೋರಿಸಬೇಕೆಂದು ಮೊನ್ನಿನ ದಿನದಲ್ಲಿ ಮಹನೀಯರಾದ ಸಭಿಕರು ಆಜ್ಞಾಪಿಸಿದುದು?

ಸೂತ್ರ॥ ಅಹುದು! ಆ ಪೂತವಾದ ಯಯಾತಿ ಚರಿತ್ರವು ಕರ್ಣಾಟಕ ಭಾಷೆಯಲ್ಲಿ ನಾಟಕರೂಪವೆನೆ, ಅಲಕಪುರಿ ವೆಂಕಟರಮಣ ಕವಿಯಿಂದ ನವೀನವಾಗಿ ರಚಿಸಲ್ಪಟ್ಟಿರುವುದು!

ಪಾರಿ॥ ಆರ್ಯ! ಇದಕ್ಕೆ ಮೊದಲೇ ಶ್ರೇಷ್ಠರಾದ ಕವೀಶ್ವರರು ಕರ್ಣಾಟಕಭಾಷೆಯಲ್ಲಿ ರಸಭರಿತಂಗಳಾದ ಅನೇಕ ರೂಪಕಂಗಳನ್ನು ವಿರಚಿಸಿರುವಲ್ಲಿ, ಆಧುನಿಕ ಕವಿ ಕೃತಿಯಿಂದ ಸಭಿಕರಿಗೆ ಆನಂದವೆಂತುದಿಸುವುದು?

ಸೂ॥ವೃ॥ ಮುನ್ನಂ ಕನ್ನಡದಲ್ಲನೇಕ ಕವಿಗಳ್ ಗ್ರಂಥಂಗಳಂಗೆಯ್ದಿರ ।
ಲ್ಕಿನ್ನುಂ ಗೆಯ್ವರದೇತಕೆಂದು, ರಸಿಕರ್ ಪೇಳ್ದಾರರೇಕೆಂದೆನಲ್ ॥
ಮುನ್ನಿಂ ಹೇಮಸವಾಂಗ ಭಾಸದೆಸೆವಾಸ್ತ್ರೀಗಾಗೆ ವಕ್ಷೋರುಹೋ ।
ತ್ಪನ್ನಂ ಚೆಲ್ವಿಕೆಯುಂ ಬಲಂಗೊಳಿಪುದೇನತ್ಯದ್ಭುತಂ ಲೋಕದೊಳ್॥೫॥

ಪಾರಿ॥ ಆರ್ಯ! ಇದು ನಿಜ! ಮುಂದಣ ಕರ್ತವ್ಯವೇನು?

ಸೂತ್ರ॥ ಪ್ರಿಯನೆ! ಮಹನೀಯರಾದ ಸಭಿಕರಲ್ಲಿ, ಈ ಕವಿ ಹೇಳಿರುವ ಈ ಆಶಯವನ್ನು ವಿಜ್ಞಾಪಿಸಬೇಕು. ಏನೆಂದರೆ?—

ಕಂ॥ ಬೆರೆತಿರೆ ನೀರುಂ ಪಾಲುಂ ।
ಮೆರೆವಂಚೆಯುದುಳಿದು ಜಲವ ಪಾಲಂ ಕುಡಿವ್ರೊಲ್ ॥
ಸರಸರ್ ಗುಣದೋಷಂಗಳ ।
ನರಸುತೆ ಕೃತಿಯೊಳಗೆ ಗುಣಮನಂಗೀಕರಿಪರ್ ॥ ೬ ॥

ಪಾರಿ॥ ಸುಗುಣವಿಭೂಷಣರು ಹಾಗೆ ತಾನೆ ಮಾಡುವರು?

ಸೂತ್ರ॥ ಮಿತ್ರನೆ! ಗಾನವಿದ್ಯಾವಿಶಾರದೆಯಾದ ನಟಿ ಇನ್ನೂ ಬಾರದೆ ಇರುವುದರಿಂದ ಸಭಿಕರಿಗೆ ನಮ್ಮ ವಾಗ್ಜಾಲದಿಂದ ವೃಥಾಕಾಲಹರಣವನ್ನು ಮಾಡಿಸಬೇಕಾಗಿದೆಯಲ್ಲವೆ? ನೀನು ಹೋಗಿ, ನನ್ನ ವಿನಯಸೂಚನೆಯನ್ನು ಹೇಳಿ ಆಕೆಯನ್ನಿಲ್ಲಿಗೆ ಬೇಗನೆ ಬರಮಾಡುವನಾಗು!

ಪಾರಿ॥ ಆಜ್ಞೆ! (ಎಂದು ಹೊರಟು ಹೋಗುವನು. ಬಳಿಕೆ)

ನಟಿ॥ (ಪ್ರವೇಶಿಸಿ) ಆರ್ಯನೆ! ಪ್ರಣಯಪಾತ್ರೆಯೆನಿಸುವಳ ತಪ್ಪನ್ನು ಕ್ಷಮಿಸಬೇಕು! ಮುಂದಣ ಅನುಜ್ಞೆಯೇನು?

ಸೂತ್ರ॥ ಸಾಮಾಜಿಕರನ್ನು ನಿನ್ನ ಸಂಗೀತ ಚಮತ್ಕೃತಿಯಿಂದ ಆನಂದವನ್ನೊಂದಿಸುವುದಕ್ಕಿಂತಲೂ ಬೇರೆ ಕಾರ್ಯವೇನಿರುವುದು?

ನಟಿ॥ ಮಹಾಶಯನೆ! ಆವ ಋತುವನ್ನಧಿಕರಿಸಿ ಗಾನಮಾಡಲಿ?
ಸೂತ್ರ॥ ಈಗ ತಾನೆ ಉಪಭೋಗಾರ್ಹವಾದ ವಸಂತಋತುವನ್ನು;
ನಟಿ॥ ಅಪ್ಪಣೆ!

* ವೃ॥ ಸಂತಸವೀಗುವೆಲ್ಲ ಸಮಯಂಗಳಿನತ್ಯಧಿಕಂ ವಸಂತಕಾ ।
ಲಂತವೆಭೃಂಗ ಸಂಗತಿಯಿನಂಬುರುಹಾಳಿ ಯುವರ್ಕಳಿಂದವು ॥
ತ್ಯಂತ ವಿಭಾಸಿಪುಷ್ಕರಣಿಗಳ್ ಮದನಾಶುಗ ಬಾಧಿತರ್ಲಸ ।
ತ್ಕಾಂತೆಯರೋಪರಂ ಮುದದಿನಪ್ಪುವ ಕೌತುಕವಾಂಪಹೇತುವಿಂ॥೭॥

ಸೂತ್ರ॥ ಆರ್ಯೆ! ನಿನ್ನ ಗಾನವೈಖರಿಯಿಂದ ಆರು ತಾನೆ ಆನಂದದಿಂದ ತಲೆದೂಗದಿರುವರು? ಇಲ್ಲಿ ನೋಡು! ಸಭಿಕರು;

(ಎಂಬಷ್ಟರಲ್ಲಿ—ತೆರೆಯುಲ್ಲಿ)

ಕಂ॥ ಅಪರಿಮಿತ ತೇಜದಿಂ ರವಿ ।
ವಿಪುಲೆಗೆ ಮುದವೀಯಲುಣ್ಮಿ ತೊಳಗುವ ಪರಿಯಿಂ ॥
ಕೃಪೆಯಿಂ ಪೊರೆವ ಯಯಾತಿಜ ।
ನಪನೈತರು ತಿರ್ಪನೀಗಳೋಲಗಕೊಲವಿಂ ॥ ೮ ॥

(ಎಲ್ಲರೂ ಕೇಳಿ)

ಸೂತ್ರ॥ ಆರ್ಯೆ! ಯಯಾತಿಮಹೀಪತಿ ಆಸ್ಥಾನಕ್ಕೆ ಸಪರಿವಾರನಾಗಿ ಬರುತ್ತಿರುವಂತಿದೆ! ಇನ್ನು ನಾವು ಮುಂದಣ ಪಾತ್ರಂಗಳನ್ನು ಸಿದ್ಧಪಡಿಸೋಣ ನಡೆ!
ನಟಿ॥ ಅಪ್ಪಣೆ. (ಎಂದೆಲ್ಲರೂ ಹೊರಟು ಹೋಗುವರು.)

ಇದು ಪ್ರಸ್ತಾವನೆ.

---

* ರಾಗ ಕಮಾಚ್, ರೂಪಕತಾಳ (ರಾರಾಜಿಸುವುದು ಬೇಸಿಗೆ । ಸಂತೋಷವ ನೀಡುತ ॥)

ಮಧುಕಾಲವಿದೆಂತುಶೋಭಿಕುಂ । ಮುದಕಾರಿಯೇಸುತೀ ॥ ಪ ॥ ಮಧುಪಂಗಳ । ಮೃದುರವದಿಂ । ಪುದಿದಬ್ಜದ । ಮದನದೆಕೂಡೀ ॥ ಮಧುಜಲದಿಂ । ಮದಚಯದಿಂ । ಮುದವೀವುವು । ಮಧುನಿಧಿಗಳ್ ॥ ೧ ॥ ಕುಸುಮಾಂಬಕ । ನಸಮವ್ಯಥೆ । ಯೆಸಗುತ್ತಿರ । ಲಸವಸದಲ್ಲಿ ॥ ಶಶಿಮುಖಿಯು । ಸುಸಿಲಾಶೆಯೊ । ಳೆಸೆಯಲ್ಸ್ವಪು । ರಷರಿಂದಹ ॥ ೨ ॥

(ಆ ಮೇಲೆ ಯಯಾತಿರಾಜನು ಮಂತ್ರಿಸೇನಾಧಿಪರೊಡನೆ ಸಭೆಗೆ ಬರುವನು. ಎಲ್ಲರೂ ಉಚಿತಾಸನಾಸೀನರಾಗುವರು.)

ರಾಜಂ॥ ಮಂತ್ರೀಂದ್ರ!

* ಕಂ॥ ಎಮ್ಮಯ ರಾಜ್ಯದೆ ಸಕಲರ್ ।
ತಮ್ಮಯ ಕುಲಧರ್ಮದಲ್ಲಿ ನಿರತರೆ ಧರೆಯೊಳ್ ॥
ಹಮ್ಮುಳ್ಳ ಕಲಿಗಳಿರ್ಪರೆ ।
ಸಮ್ಮದದಿಂ ಕಪ್ಪಕಾಣ್ಕೆಗಳ್ ಬರ್ಪುವೆ ಪೇಳ್ ॥ ೯ ॥

ಮಂತ್ರಿ॥ ‡ ಕಂ॥ ಸನ್ನುತ ಚರಿತನೆ ರಾಜ್ಯವ ।
ನಿನ್ನನ್ನರ್ ಸುಗುಣಶಾಲಿಗಳ್ ಪೊರೆಯುತಿರಲ್ ॥
ಬನ್ನಮದೇನಡಸುವುದೈ ।
ಮನ್ನಣೆಯಂ ಮೀರದಿರ್ಪರೆಲ್ಲರ್ ಸತತಂ ॥ ೧೦ ॥

ರಾಜಃ॥ ಭಾಪು ಭಾಪು!! ಮಂತ್ರಿವರ್ಯ! ನಿನ್ನಂತಹ ವಿಚಕ್ಷಣನಾದ ಸಚಿವಾಗ್ರಣಿಯಿರಲು ಅರಸನಿಗೇನು ಕೊರತೆ? (ಸೇನಾಪತಿಯ ಕಡೆ ನೋಡಿ) ಸೇನಾಪತಿಯೆ! ನಿನ್ನ ಮತ್ತು ಸೇನೆಯ ವಿಚಾರಂಗಳನ್ನರಿಪುವನಾಗು!

---

* ರಾಗ ಕೇದಾರಗೌಳ, ರೂಪಕತಾಳ (ಕ್ಷೇಮವೇನೈ ಸಕಲ ರಾಜ್ಯವು।) ಮಂತ್ರಿವರ್ಯ ಪೇಳ್ವುದೈನೃಪ । ತಂತ್ರವಿಶಾರದ ॥ ಪ ॥ ದ್ವಿಜರು ತಮ್ಮಯಾ ಸುಕರ್ಮ । ವ್ರಜವನೆಸಪರೆ ॥ ವೃಜಿನಮಾಧಿ ದುರ್ಭಿಕ್ಷಂಗಳ್ । ಸುಜನಚಯ ಕಲ್ಲದಿಹುವೆ ॥ ೧ ॥ ಸಕಲವರ್ಣಜರ್ಕಳೀಗಂ । ಲಕುಮಿಯಾಣ್ಮನಂ ॥ ಸುಕದಿಂದೆ ಜಾನಿಸುತ್ತಂ । ಸುಕೃತಾನ್ವಿತರಾಗಿರ್ಪರೆ ॥ ೨ ॥ ಕಲಿಗಳಾದ ಸಾಮಂತರು । ಬಲಿಶುಲ್ಕಂಗಳಂ ॥ ಒಲುಮೆಯಿಂತಂದೀಯುತೆಮ್ಮ । ಬಲುಮೆಗೊಳಿತರಾಗಿಹರೆ ॥ ೩ ॥

‡ ರಾಗ ಕಮಾಚ್, ಆದಿತಾಳ (ತಂತ್ರವಿಶಾರದನೆ । ಮಂತ್ರೀಶನೆ ॥) ಲಾಲಿಸು ಭೂವರನೆ । ಪೇಳುವೆನು ॥ ಪ ॥ ದ್ವಿಜರಾದಿ ಸರ್ವರ್ । ವೃಜಿನರಹಿತರಾಗಿ ॥ ಅಜಪಿತನಂ ಸದಾ । ಭಜಿಸುತೆ ಸುಖಿಪರು ॥ ೧ ॥ ಸಾಮಂತರಾಜರು । ನೇಮಿಸಿದಂತೆ ಕಪ್ಪಂ ॥ ತಾಮಿತ್ತು ಪೋಪರೈಕಾಮಿತ ಕೋಸುಗಂ ॥ ೨ ॥ ಮಳೆಗಳು ಸುರಿಯಲು । ಬೆಳಸುಗಳ್ ಪೆರ್ಚಲು ॥ ಒಲುಮೆಯಿಂ ನುತಿಪರೈ । ಇಳಾಧಿಪನೆನಿನ್ನಂ ॥ ೩ ॥

ಸೇನಾಪತಿ॥ * ಕಂ॥ ಅರಿಗಳ ಶಿರಂಗಳಂಕದಿ ।
ದಿರಿದುರೆಮಲೆತಿರುವ ಭೂಮಿಪತಿಗಳನವರಾ ॥
ಸಿರಿಯಂತ್ವತ್ಪದ ಕರ್ಪಿಸು ।
ತಿರುತಿರ್ಪರ್ ಸೈನಿಕರ್ ಭವತ್ಕೃಪೆಯಿಂದಂ ॥೧೧॥
ರಾಜಂ॥ ಕಂ ॥ ವರಮಂತ್ರಿ ಚಮೂನಾಯಕ ।
ರಿರೆ ಕುಂದೇನಿರ್ಕುಮೆನಗೆ ನಿಮ್ಮನ್ನರ್ ನಿ ॥
ರ್ಜರ ಗುರುವಂತೀ ಸಚಿವಂ ।
ಹರಸುತನಂತಿರೆ ಚಮುಪನಾರೆನಗೆಣೆಯೋ ॥೧೨॥

ದ್ವಾರಪಾಲಂ॥ ( ಪ್ರವೇಶಿಸಿ ) ಮಹಾರಾಜನಿಗೆ ವಿಜಯವಾಗಿಲಿ.

ರಾಜಂ॥ ಚಾರನೆ! ವೃತ್ತಾಂತವೇನು ?

ದ್ವಾರಪಾಲಕಂ ॥ ಮಹಾರಾಜ! ವನಪಾಲಕನೊಬ್ಬನು ಬಹು ಭಯಭ್ರಾಂತನಾಗಿ ತಮ್ಮನ್ನು ಕಾಣಲೋಸುಗ ಬಂದಿರುವನು!

ರಾಜಂ॥ ಅವನನ್ನು ಬೇಗನೆ ಒಳಪುಗಿಸುವನಾಗು !

ದ್ವಾರ॥ ಅಪ್ಪಣೆ! ( ಎಂದು ಹೊರಟು ಹೋದನು )

ವ್ವಾರಪಾಲಂ॥ ( ಪ್ರವೇಶಿಸಿ, ಕಂಪಿತದೇಹನಾಗಿ, ಗದ್ಗದ ಸ್ವರದೊಡನೆ ಕೈಮುಗಿದು )

† ವೃ॥ ಮಹಿಂದ್ರ ಬೇಡ ಬೇಡ ಕಾಡನಾಳ್ವ ಸೇವಕತ್ವಮಿಂ ।

---

* ರಾಗ ಬಿಲಹರಿ, ಆದಿತಾಳ ( ದ್ರೌಪತಿಯ ಖೂಳನೆ । ಈ ಪರಿಯೊಳೆಳೆ ) ರಾಜೇಂದ್ರಲಾಲಿಸೈ । ನೈಜಪನ್ನುನಾಂ ಬಿನ್ನವಿಪೆನೈ ॥ ಪ ॥ ಚಂಡವಿಕ್ರಮದ । ಗಂಡುಗಲಿಗಳೆ । ಮುಂಡೆಗಳನೆ । ಖಂಡಿಸುತೆ ॥ ಚಂಡನಾಡುತೆ । ರುಂಡ ತಂಡಗಳ । ಮುಂಡಲಾಗ್ರಗಳಿ । ನಂಡಲಿಪರು ॥ ೧ ॥ ದುಷ್ಟರನ್ನುತ । ದ್ವಿಷ್ಟ ದಂತೆ ಬಹು । ಕಷ್ಟಮಿತ್ತಪರ । ನಷ್ಟಿಸುತೆ ॥ ಶಿಷ್ಟರನ್ನುಸಂ । ತುಷ್ಟಿ ಯೊಂದಿಸುತೆ । ಶ್ರೇಷ್ಠರೆನಿಪರೆ । ನ್ನಿಷ್ಟಸೈನಿಕರು ॥ ೨ ॥

† ರಾಗ ಇಂಗ್ಲೀಷ ನೋಟ ( ಬೇಟೆನಾಯ್ಗಳನ್ನು ಬಿಡಿರಿತಡವಿದೇತಕೆ ) ಬೇಡ ಬೇಡ ಭೂಪ ನಿಮ್ಮ । ಕಾಡಿನೊಡೆತನ ॥ ನಾಡಾಡಿ ಯಲ್ಲವದು । ಬೇಡುವೆ ನಿನ್ನ ॥ ಪ ॥ ದುಷ್ಟಮೃಗಗಳಲ್ಲಿ ಬಹು । ಕ್ಲೇಷ್ಟದಿಂದಿವೆ ॥ ಶಿಷ್ಟ ಚರಿತ ಪೇಳ್ವುದೇಂ । ಕಷ್ಟಮದುವೆ ॥ ೧ ॥ ಕರಡಿಸಿಂಗಕೋಣಂಗಳು । ಅರಿಚುತಿರ್ಪುವೈ ॥ ಚಿರತೆ ಹುಲಿಕೋಣ ಹಂದಿ ಕರಿಗಳಿರ್ಪುವೈ ॥ ೨ ॥ ಬಂದು ಹುಲಿಯು ಹುಮ್ಮೆಂದು । ಬಂದು ಮಲ್ಲನ ॥ ಹಿಂದೆನಿಂದು ಕೊರಳ ಮುರಿದು । ಕೊಂದುದೈಘನ ॥ ೩ ॥

ದಹಾಹ. ಸಾಕು ಸಾಕು. ಮುದ್ರೆಯಂಸಮರ್ಪಿಪೆಂವಲಂ ॥
ಮಹಾನುಭಾವ ಕಾಡಿನಲ್ಲಿ ದುಷ್ಟ ಜಂತುಗಳ್ ಸದಾ ।
ಬಹುಶ್ರಮಪ್ರದಂಗಳಿರ್ಪುವೈ ದಯಾಳು ಪಾಲಿಸೈ ॥ ೧೩ ॥

ಅಬ್ಬಬ್ಬ! ಈ ಅಧಿಕಾರವು ನನ್ನ ಹಗೆಯುವರಿಗೂ ಬೇಡಪ್ಪಾ ಬೇಡ! ಈಗ ಹುಟ್ಟುವ ಮಗುವಿಗೆ ಕೂಡ ಬುದ್ಧಿಯನ್ನು ಹೇಳಿಕೊಡಬೇಕು.

ರಾಜಂ॥ ಏನೈ? ವನಪಾಲನೆ!

ಕಂ॥ ಶಕ್ತಿ ಯುತಂ ಭಯರಹಿತಂ ।
ಯುಕ್ತಿಗಳರಿತಿರ್ಪನೆಂದು ನಿನ್ನಂನೆನೆದಾ ॥
ಸಕ್ತಿಯಿನಿರಿಸಿರೆ ವನದೆಡೆ ।
ಯುಕ್ತಿ ಯಿನಿಂತೀಗಳೊರೆವುದೇಂ ಪೇಳ್ದಿಟವುಂ ॥ ೧೪ ॥

ವನಪಾಲಂ॥ ಮಹಾಪ್ರಭೋ! ನಾನು ಸುಸ್ತಾಡಿದೆನೆಂದು ತಮ್ಮ ಚಿತ್ತಕ್ಕೆ ತೋರಿದರೆ ಈಕ್ಷಣವೇ ಈ ಅಧಿಕಾರದಿಂದ ನಿವೃತ್ತನಾಗುವೆನು. ಅಪ್ಪಣೆ ಯಾದರೆ ಹೊರಡುವೆನು. ಈ ಮುದ್ರೆಯನ್ನರ್ಪಿಸಿಕೊಳ್ಳಬೇಕು! ( ಎಂದು ಕೊಡುವುದಕ್ಕೆ ಹೋಗುವನು.

ಮಂತ್ರಿ॥ ಮಹಾರಾಜನೆ!

ಕಂ॥ ಸಟೆಗಾರಂಗೆತ್ತಣದೀ ।
ಪಟುತರ ವಾಗ್ಜಾಲಮಿವನ ನುಡಿಯಿದು ತಥ್ಯಂ ॥
ಕಟಿರಂ ಮಧುವಂತಿರೆಯುಂ ।
ದಿಟವಾಗೀಕ್ಷಿ ಪೊಡೆಕಾಣ್ಗುಮವರ ವಿಭೇದಂ ॥ ೧೫ ॥

ಅರಣ್ಯದಲ್ಲಿ ದುಷ್ಟ ಜಂತುಗಳ ಭಯವಿದ್ದರೂ ಇರಬಹುದು!

ರಾಜಂ ॥ ಮಂತ್ರೀಂದ್ರನೆ! ನಾಳೆಯ ದಿನ ಬೇಟೆಗೆ ಬರುವೆವೆಂದು ಈ ದೂತನನ್ನು ಸಮಾಧಾನಪಡಿಸಿ ಅವನ ಕಾರ್ಯಕ್ಕೆ ಕಳುಹಿಸು.

ಮಂತ್ರಿ॥ ಅಪ್ಪಣೆ ( ವನಪಾಲಕನನ್ನು ನೋಡಿ ) ಎಲೈ ವನಾಧ್ಯಕ್ಷನೇ! ನಾಳೆಯ ದಿನ ಬೇಟೆಗೆ ಬಂದು ದುಷ್ಟ ಮೃಗಂಗಳನ್ನು ಸಂಹರಿಸುವಂತೆ ಮಹಾರಾಜರವರ ಅಪ್ಪಣೆ ಯಾಗಿರುವುದು. ಇನ್ನು ನಿನ್ನ ಕಾರ್ಯಕ್ಕೆ ಹೊರಡಬಹುದು!

ವನಪಾಲ॥ ಮಹಾಸ್ವಾಮಿಗಳ ಅಪ್ಪಣೆಯಂತೆ ಮಾಡುವೆನು. ( ಹೊರಟು ಹೋದನು. )

ರಾಜಂ॥ ನಾಳೆಯದಿನ ಮೃಗಯಾವಿಹಾರಕ್ಕೆ ತೆರಳುವುದಕ್ಕೆ ಬೇಕಾದ ಪರಿಕರಂಗಳನ್ನು ಸಿದ್ಧಪಡಿಸುವುದಲ್ಲದೆ ಬೇಟೆಗಾರರನ್ನೂ ಹೊರಡುವಂತೆ ನಿರೂಪಿಸುವನಾಗು !

ಮಂತ್ರಿ॥ ಅಪ್ಪಣೆ.

( ತೆರೆಯಲ್ಲಿ. )

ವೃ॥ ತರುಗಳ ಛಾಯೆಯಂ ಬಳಲ್ದು ಸೇವಿಪ್ಪುದಧ್ವಗಸಂಚಯಂ ವಿಭಾ
ಕರ ಖರ ತಾಪಮಂ ಸಹಿಸಲಾರದೆ ಮೇವನೆ ಬಿಟ್ಟು ವಾರಿಯಂ
ಅರಸುಗು ವೋಡುತೋಡುತೆ ಮೃಗಂಗಳು ಮಂತೆಯೆ ಗೋಗಣಂಗಳುಂ।
ಧರೆಯಿದು ಕಾಲಿಡಲ್ಸುಡುವುದೀಯಪರಾಹ್ಣಮತೀವ ದುಸ್ಸಹಂ ॥ ೧೬ ॥

ಮಂತ್ರಿ॥ ಮಹಾರಾಜನೆ! ನಡುವಗಲಾದಂತಿದೆ!

ರಾಜಂ॥ ಅಹುದು! ಕಾಲೋಚಿತ ಕರ್ಮಾನುಷ್ಠಾನಕ್ಕೆ ತೆರಳುವೆವು!

ಮಂತ್ರಿ॥ ಅಪ್ಪಣೆ! ( ಎಂದೆಲ್ಲರೂ ಹೊರಟು ಹೋದರು. )

## ದೇವಯಾನೆಯ ಅಂತಃಪುರ.

ದೇವ † ವೃ॥ ಸಹಿಪೆಂ ನಾನಿದನೆಂತು ಕಂತು ಛಲದಿಂ ಪಾಲಿಪ್ಪರಾರಿಲ್ಲದೀ।
ಮಹಿಳಾ ಚಿತ್ತಮನಿಂತು ಪುಷ್ಪಶರದಿಂ ನೋಯಿಪ್ಪುದೇಂ ನೀತಿಯೋ ॥
ಅಹಹಾ ಶಾಪಮನೀಯಲೆಂದೆಳಪೆನೇ ನೀನಂಗಹೀನಂ ಗಡಾ ।
ತುಹಿನಾಂಶೂನಿನಗಿತ್ತಪೆಂ ಮರೆತೆನೋಪ್ಪೋ ಮುನ್ನೆದೋಷಾಕರಂ॥೧೭॥

ಕಂ॥ ಮಂದಾನಿಲನೆಟಕಂ ಕೈ।
ಗೆಂದುಂ ಸಿಲ್ಕಂ ಮನೋಜನಿಂದುಸದೋಷಂ ॥
ಸುಂದರಿಯರ ನಿಂತಿನಿಬರ್।
ಕೊಂದಪರಹ ಕಾಂತರಿಲ್ಲದಾ ವೇಳೆಗಳೊಳ್ ॥ ೧೮ ॥

---

† ರಾಗ ಕಲ್ಯಾಣ, ಆದಿತಾಳ ( ಚಲಿಯಟ್ಲಾನೆ ಮರತುನೇ । ವಲಪೆಟ್ಲನೇ ಸೈರಾತುನೇ ॥ )

ಅಹ ನಾನೆಂತು ಸೈರಿಸುವೆಂ। ಮಹಿಯೊಳೆಂತು ಜೀವಿಸುವೆಂ ॥ ಪ ॥ ಕಾಂತನ ಪಿಯುಂಕರ। ನುಡಿಮನ। ಕೆಂತೋ ಸಂತೋಷಕರ ॥ ಮಿಂತಿರಲ್ಕೆ ದೂಷ್ಯೆಯಾಗು। ತಿಂತು, ದುಃಖ, ಮಾಂ, ತಹ ॥ ೧ ॥ ಹಾನಿರ್ದಯುರಲ್ಲವೇ ಶೀಕ। ಭಾನುಸ್ಮರಮಾರುತರ್ ॥ ಮಾನಿನಿಯರ್ಕಳನಿಂತು। ಹೀನಭಾಧೆಮಾಳ್ಪರೇ ॥ ೨ ॥

ಅಹ! ಕಠಿಣಾತ್ಮರೆ! ನಿಮ್ಮ ಸಾಹಸವಿನ್ನೆಷ್ಟಿರಬಹುದು?

† ವೃ॥ ಹರನುರಿಗಣ್ಣಿನಿಂದುರಿದನಂಗಜನಂದಗಜಾತ್ಮಜಾತನಿಂ ।
ಪೆರೆತಳೆದಂ ಕಳಂಕ ಮಹಿಸಂಚಯ ಮುಂಬುದರಿಂದನಂಗನಾ ॥
ಮರುತನಹಾಸದಾ ವಿರಹಿಗಳ್ಗೆಸದಂಗವಿಭಂಗರಿಂತು ಮೋ ।
ಸರಿಸುತೆ ಬಾಧೆಗೆಯ್ವರವರಾದಿ ಶರೀರವಿರಲ್ಕದೆಂತುಟೋ? ॥ ೧೯ ॥

ಹಾಹಾ! ಗುರುಪುತ್ರನೆ! ನನ್ನನ್ನು ನೃಶಂಸನಾದ ಕಾಮನ ವಶವನ್ನು ಮಾಡಿದೆಯ? ಇನ್ನೆಂತಿರುವೆನು? ಚಿ:! ಆ ದುರಾತ್ಮನನ್ನು ಸ್ಮರಿಸುವುದು ತಾನೆ ಏತಕ್ಕೆ!

ಕಂ॥ ಸುತನಿಂದಾಲಯಮೆಸೆಗುಂ ।
ಶತಪತ್ರದಿನಾದಮೆಸೆವುದಮಳತಟಾಕಂ ॥
ಹಿತನಿಂದಾತ್ಮಂ ಪ್ರಿಯತಮ ।
ಪತಿಯಿಂ ತರುಣಿಯರ ಕಾಂತಯೌವನಮೆಸೆಗುಂ ॥ ೨೦ ॥

ಅಹ! ಅಂತಹ ಪ್ರಿಯತಮನನ್ನು ಹೊಂದದಿರುವ ನನ್ನ ಜನ್ಮವಿನ್ನೇತಕ್ಕೆ? ಅರಣ್ಯದಲ್ಲಿನ ಬೆಳುದಿಂಗಳಿನಂತೆ ನನ್ನ ಹರಯವು ನಿಷ್ಪ್ರಯೋಜಕವಾಗಿರುವುದಲ್ಲಾ! ಹಾಹಾ!!!

ವೃ॥ ಮುನ್ನಿನ ಜನ್ಮದಲ್ಲಿ ಮತಿಹೀನತೆಯಿಂದಮುದಾರಸೌಖ್ಯಕಾ ।
ಪನ್ನತೆಯಂ ನೆಗಳ್ದನೊ ವಿವಾಹಕೆ ಕೇಡನೊಡರ್ಚಿತೋಷಸಂ ॥
ಪನ್ನತೆಯಾಂತೆನೋ ಪತಿಸತೀಸುಖಕಾರ್ಗಡರುಂನೆಗಳ್ದಿಡೆನೋ ।
ಎನ್ನವೊಲಾವಳಿರ್ಪಳೊ ಮನೋಹರನಿಂ ವರನಿಂ ವಿಗರ್ಹಿತಳ್ ॥೨೧॥

ಅಹ! ಏತಕ್ಕೆ ಹಂಬಲಿಸುವುದು? "ಹಸದ್ಭಿ: ಕ್ರಿಯತೇಕರ್ಮ ರುದದ್ಭಿರನುಭೂಯತೆ" ಎಂಬ ಗಾದೆಗೆ ನನ್ನ ಬಾಳ್ವಿಕೆಯೇ ದೃಷ್ಟಾಂತವೆನಿಸಿರುವುದು! ಇನ್ನೇನು ಮಾಡಲಿ? ಈ ವ್ಯಥೆಯನ್ನು ಸಹಿಸಲಾರೆನಲ್ಲಾ? ಇದು ನಿರ್ಜನ ಪ್ರದೇಶವಾದುದರಿಂದ ಉರಲನ್ನು ಬಿಗಿದುಕೊಂಡು ಪ್ರಾಣಪರಿತ್ಯಾಗವನ್ನಾದರೂ ಮಾಡಿಕೊಳ್ಳು

---

† ರಾಗ...(ಹಿಂದಿನ ಮಟ್ಟನಂತೆ)
ಹೀನಾಂಗರಾಗಿರ್ದೊಡಂ । ವಿರಹಿಗ । ಳ್ಗಾನಿಪರತಿಕಷ್ಟಮಂ ॥ ಏನ-ನೆಂಬು-ದಾದಿ-ರೂಪ । ಮಾನಿ-ರಲ್ಕ-ದೆಂತೊ-ಹಾ ॥ ೩ ॥

ವೆನು! ಈ ಕಾರ್ಯವು ಬಹು ಹೇಯವಾದುದು! ಮತ್ತು ನರಕ ಪ್ರಾಪ್ತಿಕರವಾದುದು! ಎಂದು ನಮ್ಮ ತಂದೆಯಿಂದ ಕೇಳಿದ್ದರೂ ವಿರಹವ್ಯಥೆಯು ಅಸಹನೀಯವಾಗಿರುವುದು.

ಕಂ॥ ಈ ಚಿತ್ತಜ! ನೀನಲೆ ಬಹು ।
ನೀಚಂ ವಿರಹಿಯನೆ ಜೀವಿಯಾಗಿರೆ ದಹಿಪ್ಪೈ ॥
ಗೋಚರವಾದೊಡೆ ನೀನೆನ ।
ಗಾಚರಿಸಿದ ದುಷ್ಟಕೃತಿಗೆ ಪಡಿಯಂ ಪಡೆವೈ ॥ ೨೨ ॥

ಆಹ! ಆರನ್ನು ತಾನೆ ಏತಕ್ಕೆ ದೂರುವುದು? ನನ್ನ ಪುರಾಕೃತವಿಂತಿರಲಾರೇನು ಮಾಡುವರು? ಸಾವಕಾಶವನ್ನು ಮಾಡಬಾರದು!

ಕಂ॥ ಆಗರ್ೂರವೆನೆನ್ನ ಬನ್ನವ ।
ನೇಗರ್ೂಳಿಸದೆ ಪೋದೆಯಕಟ ಮತ್ಪ್ರಿಯತಮನೊಳ್ ॥
ನಿರ್ಗುಣ! ಸೇರಿಸುತೆನ್ನಂ ।
ಸ್ವರ್ಗಕೆ ಸಂತೋಷಿಸಿಂದು, ಹಾ ಹತವಿಧಿಯೋ ॥ ೨೩ ॥

( ಎಂದು ಉರಲನ್ನು ಧರಿಸಲು, ತೆರೆಯಲ್ಲಿ )

ಕಂ॥ ಏನಿದು ತಡೆ ಶುಕ್ರಾತ್ಮಜೆ ।
ನೀನತಿಮತಿಸಹಿತೆ ಯೆನಿಸುತಿಂತಾಚರಿಪಾ ॥
ದೀನತೆಯಂ ಬಿಡು ಮುಂದಕೆ ।
ನೀನೆಂದುಂ ಕಾಣದಿರ್ದ ಸುಖಮಂ ತಳೆವಾ ॥ ೨೪ ॥

( ಎಂಬುದನ್ನು ಕೇಳಿ ಉರಲನ್ನು ಬೀಸಾಟು ಸುತ್ತಲೂ ನೋಡುತ್ತಾ ) ನಿರ್ಭಾಗ್ಯಳಾದ ನನ್ನ ಸಾವಿಗೂ ಆತಂಕಪಡಿಸಿದವರಾರು? ಆರೂ ಇಲ್ಲವಲ್ಲಾ? ಅಶರೀರವಾಣಿಯಾಗಬಹುದೇ? ಆ ವಚನಂಗಳೆಂದಿಗೂ ನಿರರ್ಥಕಂಗಳಾಗಲಾರವು! ಆಗಲಿ! ನನ್ನ ಪೂರ್ವಾರ್ಜಿತ ಕರ್ಮವಿನ್ನೂ ಎಂತಿರುವುದೋ ಅಂತಾಗಲಿ! ಚಿಂತಿಸಿ ಫಲವೇನು? ( ಎಂದು ಎದ್ದು ಕುಳಿತುಕೊಂಡು ) ಪರಮೇಶ್ವರನನ್ನಾದರೂ ಧ್ಯಾನಿಸುತ್ತಾ ಕಾಲವನ್ನು ಕಳೆವೆನು.

( ಎಂದು ಕರಗಳನ್ನು ಜೋಡಿಸಿ ಭಕ್ತಿಯಿಂದ; )

* ವೃ ॥ ಧರಣೀಭೃದ್ವರಕನ್ಯಕಾ ಹೃದಯಪಂಕೇಜಾತಸಪ್ತಾಶ್ವ ನಿ ।
ರ್ಜರನಾಥಾದಿ ಸುರಸ್ತುತಾಂಘ್ರಿಕಮಲಾ ಹೇರಂಬತಾತಾ ಗಿರೀ ॥
ಶ್ವರಚಾಪಾ, ಮುನಿಮಾನಸಾಬ್ಜಮಧುಪಾ ಫಾಲಾಕ್ಷ ವಿಶ್ವೇಶ್ವರಾ ।
ಹರಮೃತ್ಯುಂಜಯ ಪಾಲಿಸೈ ತವಪದಾಬ್ಜಾಸಕ್ತೆಯಂ ಭಕ್ತೆಯಂ॥೨೫

ಒಬ್ಬ ಸಖಿ॥ ( ಪ್ರವೇಶಿಸಿ ) ಗುರುಪುತ್ರಿಗೆ ವಂದನೆ!
ದೇವಯಾನಿ॥ ಸಖಿ ವೃತ್ತಾಂತವೇನು? ಬಾ ಸಮೀಪಕ್ಕೆ!
ಸಖಿ॥ ನಿನ್ನ ದರ್ಶನಾಭಿಲಾಷೆಯಿಂದ ಅರಸುಕುವರಿ ಯೈತರುತಿಹಳು! ( ಅಷ್ಟರಲ್ಲಿ )
ಶರ್ಮಿಷ್ಠೆ॥ ( ಪ್ರವೇಶಿಸಿ ) ಪೂಜ್ಯರ ಪುತ್ರಿಗೆ ವಂದನೆ.

ದೇವ॥ ಸಖಿ! ಸುಮಂಗಳವಾಗಲಿ! ಇದೇನು? ಈ ದಿನವಿಷ್ಟು ಮರ್ಯಾದೆಯೂ ವಿನಯವೂ ಹೆಚ್ಚಿರುವುದು?

ಶರ್ಮಿ॥ ಸಖಿ! ಮರ್ಯಾದೆಯೇ ಒಳ್ಳೆಯದಲ್ಲವೆ?

ದೇವ॥ ಹೆಚ್ಚಾದ ಮರ್ಯಾದೆ ಇರುವೆಡೆಯಲ್ಲಿ ಮನಃಪೂರ್ವಕವಾದ ವಿಶ್ವಾಸವು ಕಡಿಮೆ, ಎಂಬ ನಾಣ್ಣುಡಿಯನ್ನು ನೀನು ಕೇಳಿಲ್ಲವೆ? ಮುಖದಾಕ್ಷಿಣ್ಯಕ್ಕೋಸ್ಕರವೇ ಹೆಚ್ಚಾದ ಮರ್ಯಾದೆಯನ್ನು ತೋರ್ಪಡಿಸುವುದು!

ಶರ್ಮಿ॥ ಸಖಿ! ನಿನ್ನ ಮುಖವು ಬಹುವಿಚಾರ ಮನಸ್ಕಳಾಗಿರುವಂತೆ ಕಾಣುವುದು. ಅದಕ್ಕೆ ಕಾರಣವೇನು? ಪರ್ಯಾಯವಾಗಿ ಆಲೋಚಿಸಬೇಡ!

ದೇವ॥ ಗೆಳತಿ! ಈಗ ವಸಂತಕಾಲವು!

ಶರ್ಮಿ॥ ಆದುದರಿಂದಲೇ ಜಲಕ್ರೀಡೆಗೆ ಹೊರಡಬೇಕೆಂಬಾಶೆಯಿಂದ ನಿನ್ನಲ್ಲಿಗೆ ಬಂದೆನು. ಮಧುಮಾಸದಲ್ಲಿ ಮಾನಿನಿಯರಿಗೆ ಮಧುಕೇಳಿ ಹಿತಕರವಾಗಿರುವುದಲ್ಲವೆ?

ದೇವ॥ ಅಹುದು! ಸುಖಕರವಾದುದನ್ನೇ ಹೇಳಿದೆ! ಸಖಿ! ಆದುದರಿಂದಲೇ ನೀನು ಶರ್ಮಿಷ್ಠೆ!

---

* ರಾಗಕನಡ, ಆದಿತಾಳ ( ಏಳುಭಾನುಮತಿಯೆ । ಏಳುಶುಭಮತಿಯೆ ) ಸ್ವರ
ಹರಶಂಕರ । ಪರಮುದಯಾಕರ ॥ ಪುರಹರಭವಹರ । ಗಿರಿಜಾಮನೋಹರ ॥ ಪ॥
ನಾರದಮುಖಾಮರ । ವಾರವಿನುತಪದ ॥ ಕ್ರೂರಾಶರಹರ । ಗೌರಾಂಗಶ್ರೀಕರ॥೧॥
ಶಿತಿಕಂಠಮೃತ್ಯುಂಜಯ । ಧೃತಹರಿಣಾತಿಶಯ ॥ ಮತಿಯುತಗಿರ್ಯಧವ । ಸಿತಭೂತ
ಪತಿಭವ ॥ ೨ ॥ ಅಂಬುಜಹಿತವಿಧು । ಶುಂಭತ್ಕೃಶಾನುಸ ॥ ತ್ರ್ಯಂಬಕನಿನ್ನನೆ । ನಂಬಿ
ದೆನೋವುದೈ ॥ ೩ ॥

ಕಂ॥ ಸಂತಸವಿೂಗುಂ ತಣ್ಪಿಂ ।
ಕಾಂತೆಯರಾಡಲ್ಕೆ ನೀರಿನಾಟಂ ಮಧುಪ್ರೊಳ್ ॥
ಶಾಂತಮುದಕ್ಕುಂ ತಾಪಂ ।
ನೀಂ ತಿಳಿಸಿದೆ ಯಿಂದು ಶಿಷ್ಟಕಾರ್ಯಮನೊಲವಿಂ ॥ ೨೬ ॥

ನಮ್ಮ ಜನಕನ ಅನುಮತಿಯನ್ನು ಪಡೆದು ಹೊರಡೋಣ;
( ಎಂದು ಹೊರಟು ಹೋದರು. )

( ಬೇಡರ ಪಡೆ ಬರುವಿಕೆ)

೧ ನೆಯವನು॥ ಏನೊ. ಯಲ್ಲ. ನಿನ್ನ ತಮ್ಮನಿನ್ನೂ ಬರಲಿಲ್ಲವೋ?
೨ ನೆಯವನು॥ ನಂಜ ನಾನೂ ಕೂಡ ಬಂದೆವು! ಅವನೂ ಬರಬಹುದು.
೧ನೆ॥ ನಾವೇ ಸಾಕು! ಬೇಟೆಗೆ ಮೊದಲು ಮಾಡೋಣ!
೨ನೆ॥ ಹಾಗೆ ಮಾಡುವ!
೧ನೆ॥ ಎಲೋ. ಇಲ್ಲಿ ನೋಡು. ಎಷ್ಟು ಮನೋಹರವಾಗಿದೆ!

* ವೃ॥ ನೀರೊಳೆ ಮಿಂದು ವಾರಿಜರಜಂಗಳನಂಗದೊಳಣ್ಪುಗೊಂಡು ಸು ।
ತ್ಕಾರವದಿಂದೆ ದಾನಜಲಗಂಧಕೆ ಸಾರ್ವಮಧುವ್ರತಂಗಳಾ ॥
ಚಾರುಸುನೀಲಮಾಲೆಯನೆ ತಾಳ್ದು ಮನೋಹರಮಾಗಲೋಪಳಂ ।
ಸೇರುವೆನೆಂಬ ಸಂಭ್ರಮದೊಳೆಯ್ತರುತಿರ್ಕುಮದೊಂದುವಾರಣಂ॥೨೭॥

೨ನೆಯವನು ॥ ಕಂ॥ ಕೋರೆಯ ಪಲ್ಲಂತೋರುತೆ ।
ಧಾರಿಣಿಯಂ ನಖಸಮೂಹದಿಂ ಪರಚುತ್ತಾ ॥
ಹಾರವನರಸುತೆ ಬರ್ಕುಂ ।
ಘೋರತರಂ ನೋಡುನೋಡು ಶಾರ್ದೂಲಮದಂ ॥ ೨೮ ॥

---

* ರಾಗ ಜುಲಾಬು ಆದಿತಾಳ ( ಪಾರಿತು ಪಾರಿತು । ಘಡಮ್ಮಗಪೋತ ॥ )
ನೋಡೆಲೊ ನೋಡೆಲೊ । ಓಡುತಲಿರುವುದು ॥ ನಾಡೆಮದೇಭಂ । ಕೂಡೆಸೆ ಕಾಂತೆಯುಂ ॥ಪ॥ ವಾರಿಜರಜವ ಶ । ರೀರದೊಳಾಂತು ॥ ಬೀರುತೆ ಕಂಪಂ । ತೋರುತೆ ಸೊಂಪಂ ॥ ೧ ॥ ಸುರಿವ ಮುದಜಲಂ । ಬರಿಸಲಳಿಗಳಂ ॥ ವರನೀಲದಸರಂ । ಧರಿಸಿದಂತಿರ್ಕುಂ ॥ ೨ ॥ ಮುತ್ತನೋಡೆಲೊಪುಲಿ । ಕ್ಷುತ್ತಿನಾರ್ಭಟೆಯಿಂ ॥ ಮತ್ತೆನೆಲವಪರ । ಚುತ್ತಲಿತ್ತೈದುಗುಂ ॥ ೩ ॥

( ಕೆರೆಯಲ್ಲಿ ) ವೃ॥ ಹೊಡೆಬಡಿ ಕೊಲ್ಲುಕೊಲ್ಲು ಬಿಡುನಾಯ್ಗಳನೇಣ್ಬಲೆವೀಸುವುಲ್ಲೆಯಂ ।
ಕೆಡೆವು ಭಯಂಬಿಡೈ ಕರಿಯನಿಕ್ಕಿದೊಸಿಂಗಮಹಾ ಕೊಲಲ್ಕೆಬಾ ॥
ರೊಡೆಯನೆ ತಾನಿದಂತಡಿವೆನೆಕ್ಕಲಮಂ ಪುಲಿಯಿಲ್ಲಿಕಾಣ್ಗು ವೋ ।
ಡಿಡು ಬಿಡಬೇಡ ಬಂದೆನಿದೊ ಧೈರ್ಯವನಾಂತಿರಿಖಡ್ಗದಿಂ ಸಖಾ ॥ ೨೯ ॥

೧ನೇ॥ ( ಕೇಳಿ ) ಎಲೈ ಮಿತ್ರನೆ? ನಮ್ಮ ಶಬರನಾಯಕನು ಕಿರಾತ ಸಂಘಾತದೊಡನೆ ಬಂದು ಬೇಟೆಯಾಡುತ್ತಿರುವಂತೆ ಕಾಣುವುದು! ಮತ್ತೂ ಒಳ್ಳೆಯದೇ ಆಯಿತು. ನಾವು ನಮ್ಮ ಕುಲದೇವರನ್ನು ಸ್ವಲ್ಪ ಹೊತ್ತು ಧ್ಯಾನಿಸಿ ಆ ಮೇಲೆ ದೊರೆಯ ಅಪ್ಪಣೆಯನ್ನು ನೆರವೇರಿಸುವ.

೨ನೇ॥ ಎಲೊ? ದೊರೆಯ ಅಪ್ಪಣೆ ಅತಿಕಠಿಣವಾಗಿರುವಲ್ಲಿ ಅದನ್ನು ಅನುಸರಿಸುವುದುಳಿದು ದೇವರನ್ನು ಧ್ಯಾನಿಸುತಾ ಕುಳಿತರೆ ದೊರೆಯ ಕೋಪಕ್ಕೆ ಪಾತ್ರರಾಗುವೆವು. ದೇವರೇನು ನಮಗೆ ಕಣ್ಣಿಗಿದಿರಾಗಿರುವನೋ! ದೊರೆ ದೇವರಲ್ಲವೆ?

೧ನೆಯ॥ ಛಿ! ಮೂರ್ಖನೆ! ಕೇಳು, ದೊರೆಯ ಅಪ್ಪಣೆಯಂತೆ ನಾವು ಕೆಲಸ ಮಾಡುತ್ತಿರುವಾಗ ನಮಗೆ ಪ್ರಾಣಭಯವೂ ಕಷ್ಟಗಳೂ ಉಂಟಾಗದಂತೆ ಕಾಪಾಡುವುದಕ್ಕಾಗಿ ನಮ್ಮ ಇಷ್ಟದೇವರನ್ನು ಮೊದಲು ಸ್ತೋತ್ರಮಾಡಿ ಬಳಿಕ ಬೇರೆ ಕೆಲಸಗಳನ್ನು ಮಾಡಬೇಕು. ನಾವು ಎಂತಹ ಕೆಲಸಕ್ಕೆ ಉದ್ಯುಕ್ತರಾಗಿರುವೆವು ನೋಡು! ದೇವರ ದಯೆಯಿಲ್ಲದಿದ್ದರೆ ನಾವು ಸುಖವಾಗಿರುವೆವೇ?

೨ನೆಯ॥ ಅಹುದಪ್ಪ! ಎಷ್ಟಾದರೂ ನೀನು ದೊಡ್ಡವನು! ನಿನ್ನ ವಾಕ್ಯವೇ ನನಗೆ ವೇದವಾಕ್ಯವು! ಹಾಗೆಯೇ ಮಾಡೋಣ!

* ವೃ॥ ಗೋಗಣಂಗಳಂ ಪಾಲಿಸಲದ್ರಿಯ ಪೊತ್ತಾಂತೆಯೊಸತ್ಖ್ಯಾತಿಯಂ ।
ನೀಗೊನಿನ್ನ ಪಾದಂಗಳ ಜಾನಿಪೆವೀಗೆಮ್ಮ ತಾದುರ್ವಾಂಛೆಯಂ ॥

---

*ರಾಗ ನಾದ ನಾಮತ್ರಿಯ, ಆದಿತಾಳ (ಬೇಟ್ರಾಯುಸಾಮಿದೇವುಡಾ।ನಾಯಲ್ಲೀವಾಡ॥)
ಪಾಲಿಸೆಮ್ಮ ನಂಬುಜೋದರಾ । ಶೈಲೇಂದ್ರಧರ । ಕಾಲನುತಚರಿತಶ್ರೀಕರ ॥ ಪ ॥ ನೀಲಮೇಘನಿಭದೇಹ । ನೀಲಪಯೋದಧಿಗೃಹ ॥ ಕಾಳೀಸಹೋದರ । ಶೈಲವೈರಿಸನ್ನುತಪದ ॥ ಅ ॥ ನಿನ್ನಪಾದಂಗಳ ನಂಬಿನಾಂ । ಸನ್ನುತಿಪೆ । ಮಿನ್ನುದಯೆಯಿಂದೆ ಪಾಲಿಸೈ ॥ ಪನ್ನಗಾರಿವರರಥ । ಪನ್ನಗೇಶಶಯನದೇವ । ಗನ್ನಮೈಮಪಾಪಹರಾ । ಪನ್ನಜನಭರಣಚಣ ॥ ೧ ॥ ತರಳಧೃವನ ಪೊರೆಯು

ನಾಗಶೈಲಸನ್ಮಂದಿರವೇಂಕಟ ಭೋಗೀಶ್ವರಭೋಗಾಂಚಿತಾ ।
ಯೋಗಿವಂದ್ಯ ಸತ್ಪಾದಜಗನ್ನುತ ನಾಗಾರಿರಥಾ ಸನ್ನುತಾ ॥ ೩೦ ॥

( ತೆರೆಯಲ್ಲಿ ) ವೃ॥ ಸಚಿವಾನಿಟ್ಟಸು ನಿರ್ಜನಾಂಗಣದಿದೋ ನಾಳ್ಗಂಗಳಂ ಮೆಟ್ಟುತುಂ ।
ವಚಿಸಲ್ಕಾಗದ ವೇಗದಿಂದೆ ಪುಗುತಂ ಗುಲ್ಮಂಗಳಂ ಗುಂದ್ರಕಂ ॥
ದಚಯುಂ ಚರ್ವಿತವಾಗೆ ಬಾಣಪತನಕ್ಕಂಜುತ್ತೆ ಬೆನ್ನಂಟುತೆ ।
ವ್ಮಚ ಮೂಪಂ ಕೊಲಲ್ಕೈದಲೋಡುತಿದೊಕಾಣ್ಗು೦ ಸೂಕರಂ ಭೀಕರಂ ॥ ೩೧ ॥

೧ನೇಯುವನು॥ ( ಕೇಳಿ ) ಏನು? ನಮ್ಮ ರಾಜೇಂದ್ರನು ಇಲ್ಲಿಗೇ ಬಂದಂತಿರುವುದು! ಇನ್ನು ನಾವು ಮುಂದಿನ ಕಾರ್ಯಕ್ಕೆ ಸಿದ್ಧರಾಗುವೆವು!

( ಎಂದು ಹೊರಟು ಹೋದರು. ಬಳಿಕ ರಾಜನು ಮಂತ್ರಿಯೊಡನೆ ಬರುವನು. )

ರಾಜಂ॥ ಮಂತ್ರೀಂದ್ರನೆ! ಆ ದುರುಳ ಪಂದಿ ಕಣ್ಣಿಗೆ ಕಾಣಿಸಿ ಮಾಯವಾಯಿತಲ್ಲಾ!

ಮಂ॥ ಮಹಾರಾಜನೆ!

ಕಂದ॥ ವ್ಶೈಚಾಯೆ ಬೆಳಸಡಗಿಸ ।
ಲಾಚಾರರೂರ್ವೀಜಚಯದ ಮಧ್ಯಕೆಪೋಯ್ತೈ ॥
ಗೋಚರಿಪುದಿಲ್ಲಿಬರೆನಾ ।
ರಾಚವನೇರಿಪುದು ಚಾಪದೊಳ್ರಯದಿಂದಂ ॥ ೩೨ ॥

ಮಹಾರಾಜನೆ! ಇನ್ನೂ ಇತ್ತ ಬರಬೇಕು! ಈ ಸಂದಿಯಲ್ಲಿ ಕಾಣುವುದು!

ರಾಜಂ॥ ಒಳ್ಳೆಯದು! ( ಎಂದು ಬಾಣವನ್ನು ಸಂಧಾನಮಾಡಿದಂತೆ ನಟಿಸಿ)

---

ಲಿಲ್ಲವೆ । ಶಬರಿಯೆಂಬ । ತರಳೆಯ ಕಾಪಾಡಲಿಲ್ಲವೇ । ಅರೆಯಸತಿಯಳ ಮಾಡಲಿಲ್ಲವೆ । ಕರುಣದಿಂ ಪ್ರಹ್ಲಾದನನ್ನು । ಪೊರೆಯಲಿಲ್ಲವೆ ಪ್ರೀತಿಯಿಂದ । ನಿರತರೈತವ ಸೇವೆಯೊಳಗಾಂ ॥ ೨ ॥ ನೀರಿನಲ್ಲಿಪುಟ್ಟಿ ಬೆಟ್ಟವ । ಬೆನ್ನಿನೊಳೆ । ಧೀರನೆನಿಸಿ ಪೊತ್ತಮಾದೇವ ॥ ಕ್ರೂರದೈತ್ಯನ ಕೊಂದುವೇದವ । ದಾರಿಣಿಗೆ ತಂದುದೇವ । ವಾರದಿಂದತಿಪೂಜೆಗೊಂಡ । ಸಾರಸೋದ್ಭವ ಜನಕಭವಹರ ॥ ೩ ॥

ಮಂತ್ರಿ! ಲಕ್ಷ್ಯಕ್ಕೆ ತಪ್ಪಿಸಿಕೊಂಡು ಹೋಯಿತಲ್ಲಾ? ( ಸ್ವಲ್ಪ ಸಂಚರಿಸಿ ) ಇದೋ ಇಲ್ಲಿಗೆ ಕಾಣುವುದು.

* ವೃ॥ ಎಲ್ಲಿಗೆ ಪೋಪೆನಿಲ್‌ಕಿಟಿಯೆ, ಬಾಣಕೆಸಿಲ್ಕದೆ ವೃಕ್ಷಛಾಯೆಯೊಳ್ ।
ಗೆಲ್ಲದೆ ನಿನ್ನನೈದೆನಲೆ! ಬರ್ಕಣದಿಕ್ಕುವೆ ನೀಕ್ಷೃಪಾಣದಿಂ ॥.
ಮಲ್ಲಳಿಯಂ ವಿನಾಶಿಸುವೆನಾಂ ಬಿಡು ದೇಹದವಾಂಛೆಯಂ ರಮಾ ॥
ವಲ್ಲಭನಂಘ್ರಿಯಂ ನೆನೆದು ಮುಕ್ತಿಯನೊಂದುವ ಮಾರ್ಗಮಾಂತಿರ್ಕೈ ॥೩೩॥

ಮಂತ್ರೀಂದ್ರ! ಆದುರುಳಪಂದಿ ಅತ್ತಕಡೆ ಓಡುತ್ತಿರುವುದು. ಕತ್ತೆತ್ತಿನೋಡು!
ಮಂತ್ರಿ॥ ಅಹುದು. ( ಎಂದಿಬ್ಬರೂ ಹೊರಟುಹೋಗುವರು ).

ಪ್ರಥಮಾಂಕಂ ಮುಗಿದುದು.

ಶ್ರೀರಾಮಂ.

---

* ರಾಗಕಮಾಚ್, ರೂಪಕತಾಳ ( ನಿನ್ನಪಾದವನ್ನು ನಂಬಿದೆ । ಶ್ರೀನಿವಾಸ॥ )
ಎಲ್ಲಿಪೋಪೆನಿಲ್ಲುಹಂದಿಯೆ । ಕೊಲ್ಲದಿರೆ ನೆಲ್ಲಿ ॥ ಪ ॥ ಕಲ್ಲುಗಳ ಮೇಲೆ ತೋರೆ । ಹಲ್ಲುಗಳ ಮಸೆದರೇನು ॥ ಭಲ್ಲೆಯಿನಿರಿದಲ್ಲದೆಬಿಡೆ । ನಿಲ್ಲಿನಿನ್ನ ನತಿಶಯದೊಳೆಲ್ಲಿ ॥ ಅ ॥ ಬಹಳದೂರಮೆನ್ನನೋಡಿಸಿ । ಬಳಲಿಸಿದೆ । ಅಹಕಾಣೆ ನಿನಗೆಣೆ । ಮಹಿಯೊಳಗ ದಾವಮೃಗವ ॥ ಕುಹಕವನುಳಿದೆನ್ನೊಳನೀಂ । ಕುಹರತೆಬಾ ಕೊಂದಿಕ್ಕುವೆನೆಲ್ಲಿ ॥ ೧ ॥ ಭಂಡಮೃಗವೆಮದದಿಂದೆನ್ನು ನಂಡಲಿಸಿದೆ । ಮಂಡಲಾಗ್ರದಿಂದನಿನ್ನ । ರುಂಡಮುಂಡಗಳ ಬಿಡಿಪೆಂ ॥ ಗಂಡುಗಲಿಯಾದೆನ್ನೊಳ್ । ಚಂಡಿತನ ಮೆಸಗುತೆನೀನೆಲ್ಲಿ ॥ ೨ ॥ ವನದೆನಿಮ್ಮ ಕುಲವು ಪೆರ್ಚಿನಿ । ಜನವಮಾಯ್ತು ॥ ಘನತಿಟಿಯಿನ್ನೆಲ್ಲಿಪೋಪೆ । ಜನಪನಕೈಸೇರ್ದಮೇಲೆ । ವನಜಾಕ್ಷನ ನೆನೆಯಾತ್ಮದೊ । ಳನುಮಾನವನುಳಿಯೋಡುವುದೆಲ್ಲಿ ॥ ೩ ॥

# ದ್ವಿತೀಯಾಂಕಂ.



( ದೇವಯಾನೆ ಸಖಿಯರೊಡನೆ ಪ್ರವೇಶಿಸುವಳು. ಉದ್ಯಾನವನಂ )

ದೇವಯಾನೆ॥ ಸಖಿ! ಶರ್ಮಿಷ್ಠೆ!

* ವೃ॥ ಇದೊ ಸುಮಪಲ್ಲವಾವಳಿಗಳಿಂ ಸಲೆಶೋಭಿಪಗುಲ್ಮಸಂಕುಲಂ ।
ಹೃದಯಕೆ ಮೋದಕಾರಿಯೆನೆ ಕಾಣ್ಬ ಲತೌಘದ ತೂಗುವುಯ್ಯಲಿಂ ॥
ತಿದೊರಮಣೀಯಮಭ್ರಸುಮದಂತುದಿರಲ್ವರಮಲ್ಲಿಕಾಸುಮಂ ।
ಸುದತಿ! ಇದೀಕ್ಷಿಸಾ ತಳಿರೆತೋರಣದಂತುರೆತೋಷ ಮೊಂದಿಕುಂ॥೩೪॥

ಶರ್ಮಿ॥ ಸಖಿ! ಇಲ್ಲಿನೋಡು! ತಮ್ಮ ಮನೋಹರವಾದ ನುಡಿಗಳಿಂದ ಪಥಿಕರಿಗಾನಂದಮನುಂಟುಮಾಡುವ ಶುಕಂಗಳ ಚಂಚೂಪುಟದಿಂದ ಭೇದಿಸಲ್ಪಟ್ಟ ಇನಿಮಾವಿನ ಹಣ್ಗಳಿಂ ಸೋರುವ ಮಧುವನನುಕರಿಪ ರಸಂ ದಾರಿಗರ ನೆತ್ತಿಯ ಮೇಲೆ ಬಾಂದೊರೆಯ ಬಿಂದು ನಂಧಕಾರಿಯ ಶಿರದ ಮೇಲೆ ನಿಂದು ಲೋಕಕ್ಕಾನಂದ ಮಿತ್ತಂದದಿಂದೆ ಬಂದು ಬೀಳುವುದು! ಇಲ್ಲಿನೋಡು! ಪುಷ್ಪಿತಮಲ್ಲಿಕಾವಲ್ಲಿಗಳನ್ನರಸಿಕೊಂಡು ಝೇರೆಂದು ಪುಯ್ಲಿಡುತೆ ಕಂಡ ಕಂಡ ಮಾಗಿ ಅಂಡಲೆಯುವಬಂಡುಣಿಗಳ ಸಾಲುಗಳನ್ನು ಕಂಡು, ಅವುಗಳ ಶಬ್ದವನ್ನೇ ಘನಗರ್ಜನೆಯೆಂದೂ, ಅವುಗಳ ಮೈಬಣ್ಣವನ್ನೇ ಕಾರ್ಮುಗಿಲೆಂದೂ ಅಲ್ಲಲ್ಲಿ ಸಂಚರಿಸುವ ಕಿರಾತಿನಿಯರ ಚಂಚಲವಾದ ನೇತ್ರಂಗಳ ಹೊಳಪನ್ನೇ ಮಿಂಚೆಂದೂ ಭ್ರಮಣೆಯನ್ನು ಹೊಂದಿ ನವಿಲುಗಳ ಸಮೂಹವು ಸಂತೋಷದಿಂದ ಕುಣಿಯುತ್ತಿರುವುದು!

ದೇವ॥ ಸಖಿ! ಇಲ್ಲಿನೋಡು! ಈ ಸ್ಥಳವು ಮಲ್ಲಿಕಾ ಕುಸುಮಂಗಳುದಿರಿರುವುದರಿಂದ ಹಂಸತೂಲಿಕಾ ತಲ್ಪದಂತೆ ಮಲಗುವುದಕ್ಕೆ ಎಷ್ಟು ಮೃದುವಾಗಿಯೂ ರಮಣೀಯವಾಗಿಯೂ ಇರುವುದು !

---

* ರಾಗ ಜಂಜೂಟಿ, ಆದಿತಾಳ ( ಸೊಗಯಿಪುದು । ತೋಟಮಿದು । ಕೋಕಿಲವಾಣಿ) ಶೋಭಿಸುವುದೀವನವು । ಶಶಿನಿಭಾನನೆ ॥ ಪ ॥ ಪಲ್ಲವಾಳಿಯಿಂದೆಮೇಣ್ । ಫುಲ್ಲಸುಮಗಳಿಂದೆ ಕೂಡಿ । ಸಲ್ಲಲಿತ ದಿಲ್ಲಿತೋರ್ಪ- ವೆಲ್ಲಗುಲ್ಮಗಳು ॥ ಫುಲ್ಲ-ಪುಷ್ಕ-ರಾಂಬಕಿಯೆ । ಇಲ್ಲಿ-ನೋಡೆಬಾ ॥ ೧ ॥ ಲತೆಯತೂಗುವುಯ್ಯಲೆ । ಯತಿಮನೋಹರವಾಗೆ । ಕುತಲ-ಕಲಂ-ಕೃತಿಯಿ-ದೆನಿಸಿ । ನುತಿಗೆಪಾತ್ರಮೌ । ಹಿತೆ-ಮಲ್ಲಿಕಾ-ಸುಮ । ವಿತತಿಯುದುರುತೆ ॥ ೨ ॥

ಶರ್ಮಿಷ್ಠೆ॥ * ವೃ॥ ನೋಡು ಸಖೀ! ಸರೋವರ ಮತೀವ ಕುಶೇಶಯದಿಂ ಮನೋಹರಂ।
ನಾಡೆಸುರೇಂದ್ರ ನೀಲಮಣಿಯಂತಿರೆ ವಾರಿ, ಗಭೀರವಾದವೋ ॥
ಡಾಡುವ ನೀರಚಾರಿಗಳ ಮೈ ಪೊಳಪೆಂತುರೆ ಕಾಣ್ಗು, ಮೊಯ್ಯಾನೀ ।
ಜಾಡುವ ಬನ್ನಿವಿಾಗಳತಿಪೋದದೊಳಿಲ್ಲಳಿಯಲ್ ಮಧುಶ್ರಮಂ ॥ ೩೫ ॥

ದೇವ॥ ಅಹುದು ಪ್ರಿಯೆ! ಈ ಸರೋವರವು ಅತ್ಯಂತ ಸಂತೋಷಜನಕವಾಗಿರುವುದು. ಇನ್ನು ಮುಂದಿನ ಕರ್ತವ್ಯವನ್ನು ಮಾಡೋಣ!

ಶರ್ಮಿಷ್ಠೆ॥ ಚೆನ್ನಾಗಿ ಹೇಳಿದೆ ಸಖಿ! (ಎಂದೆಲ್ಲರೂ ಹೊರಟು ಹೋದರು.)

(ತೆರೆಯಲ್ಲಿ) ವೃ॥ ಏನಿದೇನಿದಮ್ಮ ನಡತೆನೀಂಗಳೀತೆರಂ ।
ಮಾನಹಾನಿಯಪ್ಪುದರಿಯದಿಂತುಗೆಯ್ವಿರಾ ॥
ಭಾನುಚಂದ್ರವಹ್ನಿನಯನನಂತರಿಕ್ಷದೊಳ್ ।
ಶ್ರೀನಗೇಂದ್ರಜೋಕ್ಷರೊಡನೆ ಪೋಪನಿಲ್ಲಿಯೀ ॥ ೩೬ ॥

(ಬಳಿಕ ವಿದೂಷಕ‡ ಪ್ರವೇಶಂ.)

ವಿದೂಷಕಂ॥ ಅಹ! ವಿಧಿಯೆ! ಈಗ ಏನನ್ನು ತಾನೆ ಮಾಡಲಿ? ಬೇಟೆಯಾಟದ

---

* ರಾಗ ನಾಟುತುರಂಜಿ ರೂಪಕತಾಳ (ಚಲಮೇಲರಾ । ನನ್ನೆಲಗ ॥) ಮೆರೆಯುವುದು ॥ ಪ ॥ ಸರಸೀರುಷಂಡ ಮಿಂತು । ಹರುಷಂ ಮನಕೀಯುತೆ॥ ಆ ಭ್ರಮರಂಗಳಿಂ । ಕಮಲಂಗಳಿಂ । ಸುಮನೋಹರಂ । ವಿಮಲಾಂಬುಯುತಂ ॥ ಅಮಮ ಮನಸಿಜಾತವಿಭವಂ । ಪ್ರಮದೆಯರ್ಗೆತೋರುತಧ್ಯೆ ॥೧॥ ರಾಜಹಂಸಸ । ದ್ರಾಜಿಯಿಂದೆ ನಿ । ರಾಜಿಸುವುದು । ಮೂಜಗಕಮಿತಂ ॥ ಸೋಜಿಗಮಿದು ಜಲಚರಂಗ । ಳೋಜೆಯಿಂದೆ ಕೂಡುತಾಹ ॥ ೨ ॥ ವಾರಿಜಾಕ್ಷಿಯಳೆ । ವಾರಿಕೇಳಿಗೆ । ಸಾರಿಬೇಗನೆ । ಮೀರಿದ ಮುದದಿಂ ॥ ಸಾರಿದೀ ವಸಂತಕಾಲ । ದಾರಿಸುತಂ ಬೇಸರಿಕೆಯ ॥ ೩ ॥

‡ ರಾಗ ಧೀರಶಂಕರಾಭರಣ ಸೋಟು (ಹಾ ಹಾ ಏನಿದು । ಪ್ರೋಹಮಾದುದು ॥) ಏನುಮಾಡಲಿ । ಕಾನನದಲಿ॥ ದೀನನಾದೆ । ಹೀನನಾದೆ । ಜ್ಞಾನವಿಲ್ಲದೆ ॥ ಪ ॥ ಅನ್ನವಿಲ್ಲದೆ । ಮುನ್ನಿನಂದದೆ ॥ ಎನ್ನ ಹೊಟ್ಟೆ । ಯನ್ನು ಮುಟ್ಟೆ । ಗನ್ನಳೊಳ್ಳೊಟ್ಟೆ ॥ ೧ ॥ ಬೇಡ ಬೇಡವು । ಕಾಡನೈದುವು ॥ ದೀಡು ಮಾಳ್ದೆ । ನಾಡಿದೆನಂದೆ । ಬೇಡರಿಗಿದೆ ॥ ೨ ॥ ಎಲ್ಲಿ ಹೋದನೋ । ಎಲ್ಲಿ ಬಳಲ್ದನೋ ॥ ಖುಲ್ಲ ಮೃಗಗಳಲ್ಲಿ ವ್ಯಥೆಗ । ಳಲ್ಲಿ ಮತ್ಸಖಂ ॥ ೩ ॥

ಲ್ಲಿಯೇ ಆಸಕ್ತಚಿತ್ತನಾದ ಆ ರಾಯನ ಸಹವಾಸವನ್ನು ಹೂಡಿ ಕೆಟ್ಟೆನಲ್ಲಾ? ಇದು ಬಹಳ ಕಷ್ಟತರವಾದುದೆಂದು ಎಷ್ಟು ಹೇಳಿದರೂ ಕೇಳದೆ ನನ್ನನ್ನು ಕರೆದು ತಂದು, ಇಷ್ಟು ಕಷ್ಟಕ್ಕೆ ಗುರಿಮಾಡಿದನಲ್ಲಾ! ಇದೋ ಹುಲಿ! ಇದೋ ಕರಡಿ! ಇದೋ ಹಂದಿ! ಇದೊ ಹುಲ್ಲೆ! ಎಂದು ತೋರಿಸುತ್ತಾ ಒಂದು ಕ್ಷಣವೂ ನಿಲ್ಲು ತಡೆಯಿಲ್ಲದೆ ಕುದುರೆಯ ಹಿಂದೆ ಓಡಿ ಓಡಿ, ಕೈಕಾಲುಗಳು ನೋವುಹತ್ತಿ, ಕೀಲುಗಳು ಬಿಗಿವು ಹತ್ತಿ, ಕುಳಿತುಕೊಳ್ಳುವುದಕ್ಕೆ ಕೂಡ ಅಸಾಧ್ಯವಾಗಿ ನಿಂತುಕೊಂಡೇ ಹೊತ್ತನ್ನು ಕಳೆಯಬೇಕಾಯಿತು. ಹೊತ್ತಿಗೆ ಗೊತ್ತಾಗಿ ಅನ್ನವಿಲ್ಲದೆ ನನ್ನ ಮುದ್ದಿಗೆ ಪಾತ್ರವಾದ ಈ ಸುಂದರವಾದ ಬೊಜ್ಜೆ, ಟೊಳ್ಳಾಗಿ ಮುಟ್ಟಿದರೆ ಮೆತ್ತಗಾಗಿ ಬಹು ಸಂಕಟಪಡಿಸುವುದು. ಬಿಸಿಲಿನ ಬೇಗೆಯಿಂದ ಅಲ್ಲಲ್ಲಿ ಹರಿಯುವ ಜಿಳುಪಾದ ಜೌಗು ನೀರನ್ನೇ ಹಾಲೆಂದು ಸವಿವಂತಾಯ್ತು. ಈ ವ್ಯಥೆಗಳಿಂದ ರಾತ್ರಿಯೆಲ್ಲಾ ನಿದ್ರೆ ಇಲ್ಲದೆ ಆವಾಗಲೇ ಸ್ವಲ್ಪಹೊತ್ತು ಕಣ್ಣುಗಳನ್ನು ಮುಚಲು ಕಾಡನ್ನು ಕಾಯುವ ನೀಚರಾದ ಬೇಡರ ಕಲಕಲದಿಂದ ಎಂದೋ ಎಚ್ಚರವಾಯಿತು. ಇಷ್ಟಾದರೂ ಸಹಿಸಿರುವನೆಂದರೆ ಮೊದಲೇ ಪಿಶಾಚ ಹಿಡಿದವನ ಕೈಗೆ ಚೇಳ್ಕಡಿದಂತಾಯಿತು. ಆ ದುರುಳ ಹಂದಿಯನ್ನಟ್ಟಿಕೊಂಡು ಹೋದ ರಾಜನು ನಿನ್ನೆಯಿಂದಲೂ ಬಂದಿಲ್ಲವಲ್ಲಾ. ಈ ಜಾಳಾದ ಹೊಟ್ಟೆಯ ಭಾರದಿಂದಲೂ, ಕೈಕಾಲುಗಳು ಸೋತಿರುವದರಿಂದಲೂ, ಮುಂದಕ್ಕಡಿ ಇಡಲಾರೆನು. (ಎಂದು ಸುತ್ತಲೂ ನೋಡಿ) ನಮ್ಮ ಮಹಾರಾಜನಿತ್ತಕಡೆ ಬರುವಂತೆ ಕಾಣುವುದು. ಬಹು ಶ್ರಮವನ್ನು ವಹಿಸಿದವನಾದರೂ ಜಗನ್ಮೋಹತರನಾಗಿಯೇ ಇರುವನು. ಹಾಗೆಯೇ ಸರಿ!--

ವೃ॥ ಕರಿಕರದಂತೆ ಬಾಹುಯುಗವೊಪ್ಪಿರೆ ದಿಟ್ಟೆಯಿರಲ್ ದಿಗಂತದೊಳ್।
ಹರಿಸಮ ಮೊಪ್ಪಲಂಗಮದು ಮನ್ಮಥನಂತೆ ವಿಭಾಸಮಾಗಿರಲ್॥
ಶರನಿಧಿ ಪೊಲ್ ಗಭೀರತೆಯಿನದ್ರಿಸಮಂ ವರಧೀರನಾಗಿ ತೋ।
ರ್ಪರಸನಿದೋಬಳಲ್ಕೆ ತಳೆದಿರ್ದೊಡ ಮಾವನನಂತಮೋದಮಂ ೩೭

ಆಗಲಿ! ಹೀಗೆ ಪ್ರಸ್ತಾಪಿಸುವೆನು!

(ಎಂದು ದೊಣ್ಣೆಯನ್ನು ಊರಿಕೊಂಡು ನಿಂತಿರುವನು.)

ರಾಜಂ॥ (ಪ್ರವೇಶಿಸಿ) ಮಿತ್ರನೆ! ಸುಖಿಯಾಗಿರುವೆಯಾ? ಏಕೆ ಹೀಗೆ ನಿಂತಿರುವೆ?

ವಿದೂಷಕಂ॥ ಮಿತ್ರನಾದ ಮಹಾರಾಜನೆ! ನಿನ್ನಂತಹವರ ಸಹವಾಸದಲ್ಲಿರುವ ನನಗೆ ಸುಖವೋ? ಸ್ವಪ್ನವೋ?

ರಾಜಂ ॥ ( ವಿನಯದಿಂದ ) ಏಕೆ ಮಿತ್ರನೆ ?

ವಿದೂ ॥ ( ಪರಿಹಾಸೆಯಿಂದ ಗೂಡಿ ) ಏಕೇ ? ತಾನೇ ಕಣ್ಣನ್ನು ಚುಚ್ಚಿ ಕಣ್ಣೀರೇಕೆ ಬಂದಿತೆಂಬುವನಿಗೆ ಹೇಳುವದೇನಿದೆ ?

ರಾಜಂ ॥ ಅಂತಹುದೇನು ?

ವಿದೂ ॥ ಏನೇ? ಮೃಗಯಾ ವ್ಯಸನವು ಬಹಳ ವ್ಯಸನಕರವಾದುದೆಂದು ನಾನು ಮೊದಲೇ ಸೂಚಿಸಿದೆನು. ನೀಚರಾದ ಆ ದುರ್ಮಂತ್ರಿಗಳ ಪ್ರೇರಣೆಯಿಂದ ನನ್ನ ಮಾತನ್ನು ತೃಣೀಕರಿಸಿದೆ. ದುರುಳ ಪಂದಿಯನ್ನು ಕೊಲ್ಲುವುದಕ್ಕೆ ನಿನ್ನೆಯಿಂದಲೂ ಬಹು ಶ್ರಮವನ್ನು ಹೊಂದಿ ಬಳಲಿಕೆಯನ್ನೊಂದಿರುವ ನಿನಗೂ ಹೊತ್ತಿಗೆ ಗೊತ್ತಾಗಿ ತುತ್ತಿಲ್ಲದೆ ಬತ್ತಿದ ತತ್ತಿಯಂತಿರುವ ಈ ಕೆಟ್ಟ ಹೊಟ್ಟೆಯ ಮೇಲೆಯೇ ಇಷ್ಟವುಳ್ಳವನಾದ ನನಗೂ, ಈ ಕಷ್ಟಂಗಳನ್ನು ಕಳೆಯುವರಾರು ? ಆ ತೊತ್ತಿನ ಮಕ್ಕಳೆತ್ತ ಹೋದರೋ? ನಿನ್ನ ಹೊಟ್ಟೆಯೇನೋ ಪುಷ್ಟದಾಗಿದೆ. ಅನ್ನವಿಲ್ಲದೆ ನೀನು ಸ್ವಲ್ಪ ಹೊತ್ತು ತಡೆದರೂ ತಡೆಯಬಹುದು. ನನ್ನ ಈ ಕೆಟ್ಟ ಹೊಟ್ಟೆಯನ್ನು ಮುಟ್ಟಿ ನೋಡು. ನಾನು ಹಸಿವನ್ನು ಸಹಿಸುವುದು ಹೇಗೆ? ನೀನು ತಾನೆ ಹೇಗೆ ಸಹಿಸುವೆ? ಮಿತ್ರನೆ! ರಾಜೋಪಚಾರಗಳಿಂದ ಅರಮನೆಯಲ್ಲಿ ಸುಖಿಸುತ್ತಿದ್ದೆಯಲ್ಲವೆ? ಅಯ್ಯೋ!

ರಾಜಂ॥ ಮಿತ್ರನೆ! ಸ್ವಲ್ಪ ಸಮಾಧಾನವಂತನಾಗು. ನಾವು ಬಂದ ಕೆಲಸವು ಸಂಪೂರ್ಣವಾಗಿ ನೆರವೇರಿತು. ಈ ತಣ್ಣಾದ ಶಿಲಾಪೀಠದ ಮೇಲೆ ಸ್ವಲ್ಪ ವಿಶ್ರಮಿಸಿಕೊಂಡು ಬಳಿಕ ಪಟ್ಟಣಕ್ಕೆ ಹೊರಡೋಣ? ಸೇನಾಧಿಪಾದಿಗಳೆಲ್ಲಿರುವರೋ ಕಾಣೆನು. ಅವರೂ ಬಹು ಶ್ರಮವನ್ನು ಹೊಂದಿರುವರು. ಎಲ್ಲರನ್ನೂ ಜತೆಗೊಂಡು ಹೊರಡೋಣ.

ವಿದೂ॥ ಈ ಮಿತ್ರನಿಗೆ ಸಿಕ್ಕಿದುದನ್ನು ತಿಂದು ಬೇಕಾದರೆ ಅಲ್ಲಿ ಬಿದ್ದಿರುವ ಶೀಲವುಳ್ಳವರಾದ ಆ ತೊತ್ತಿನ ಮಕ್ಕಳ ಆಲೋಚನೆಯೇ ಹಿಡಿದಿದೆ. ಪಟ್ಟಣದಲ್ಲಿ ರುಚಿರುಚಿಯಾದ ಭಕ್ಷ್ಯಭೋಜ್ಯಂಗಳನ್ನೂ ಆಕುಳಿಸಿದರೆ ಈಚೆಗೆ ಕಾಣಿಸುವವರೆಗೂ ತಿಂದು ತೇಗಿ ತನ್ನ ಯಶಸ್ಸನ್ನು ಹೊಗಳುತ್ತಾ, ನಲಿಯುತ್ತಿದ್ದ ನನಗೆ ಒಣಗಿದ ಅತ್ತಿಯ ಹಣ್ಣುಗಳೇ ದಿವ್ಯಾಹಾರವಾಗಿ, ಜೌಗು ನೀರೇ ಹಾಲಿನಂತಾಗಿ, ನೆಗ್ಗಲಿಯ ಮುಳ್ಳುಗಳೇ ಪಾದರಕ್ಷೆಯಂತಾಗಿ ವ್ಯಸನಪಡುವ ನನ್ನ ಹಂಬಲನ್ನೇ ಬಿಟ್ಟು ಬಿಟ್ಟನಲ್ಲಾ! ಇನ್ನೇನು ಮಾಡಲಿ ? ಹಾ! ಮಿತ್ರನೆ! ಮಹಾರಾಜನಾದ ನೀನೂ ನನ್ನಂತೆಯೇ ಶ್ರಮವಾಂತಿರುವೆಯಲವೆ ?

ರಾಜಂ॥ ಮಿತ್ರನೆ! ನಿನಗೆ ಶ್ರಮವನ್ನುಂಟುಮಾಡಿದ ನನ್ನ ತಪ್ಪನ್ನು ಕ್ಷಮಿಸು! ನನ್ನ ಬಳಲ್ಕೆಗಾಗಿ ನೀನು ತೋರ್ಪಡಿಸಿದ ಉಪಕೃತಿಗೋಸ್ಕರ ನಿನಗೆ ಕೃತಜ್ಞನಾಗಿರುವೆನು! ನೀನೇ ಸನ್ಮಿತ್ರನು! ಹಾಗೆಯೇ ಸರಿ—

ವೃ॥ ಮೊದಲೊಡ ನೊಂದಿದಾ ಕತದೆ ಪಾಲಿನಳಲ್ಗುರೆನೊಂದುತಾನೆಮು।
ನ್ನೊದಗೆ ವಿನಾಶಕಾಗಳದ ನೀಕ್ಷಿದ ಪಾಲ್ಕಿಡಲ್ಕೆದಲಗ್ನಿಯೊಳ್॥
ಸದಯದೆ ನೀರನರ್ಪಿಸೆ ಮುದಂ ಬಡೆಗುಂ ಮೊದಲಂತೆಯಿಂತು ಸ।
ದ್ಧೃದಯರೆನಿಪ್ಪಮಿತ್ರಜನಕೊಪ್ಪುಗುಮೀಗುಣವಾರ್ಯಮಿತ್ರನೆ ॥೩೮॥

ಅಲ್ಲದೆ ತಮ್ಮನ್ನು ಆಶ್ರಯಿಸಿದವರ ಯೋಗಕ್ಷೇಮವನ್ನು ವಿಚಾರಿಸದಿದ್ದರೆ ತಮಗೆ ಸುಖವೆಲ್ಲಿಯದು?

ವಿದೂ॥ ಮಹಾರಾಜನೆ! ಸಜ್ಜನಾಗ್ರಣಿಯಾದ ನಿನಗೆ ಈ ಗುಣವು ಸ್ವಭಾವಸಿದ್ಧವಾದುದು! ಹಾಗೆಯೇ ಸರಿ!

ಕಂ॥ ಆಶ್ರಿತಲೋಕವ ಪೊರೆಯಲ್।
ವಿಶ್ರಾಂತಿಯನೆಳಸನರ್ಕನವನಪ್ರೋಲೆಂದುಂ॥
ಆಶ್ರಿತಲೋಕವಪೊರೆಯಲ್।
ವಿಶ್ರಾಂತಿಯನೆಳಸದಿರ್ಪ ನಿನಗಿದು ಸಾಜಂ॥ ೩೯॥

(ಎಂದು ಶಿಲಾಪೀಠದಲ್ಲಿ ಕುಳಿತುಕೊಳ್ಳುವರು).

(ತೆರೆಯಲ್ಲಿ)

* ವೃ॥ ಹಾಹಾ ಸೈರಿಸಲಾರೆನಾ ರಮಣಿತಾಂ ದುರ್ಬುದ್ಧಿಯಿಂ ವಂಚಿಸಲ್।
ಸೈಹಾಸ್ಯಂ ಕಟುವೆಂಬ ರೀತಿಯ ಮಹಾಕಷ್ಟಂ ಜಲಕ್ರೀಡೆಯೊಳ್॥
ಸ್ನೇಹಂ ತಾಳ್ದು ಸಖೀನಿಕಾಯಯುತೆ ಯೆಯ್ತಂದುತ್ಕಟಶ್ರಾಂತಿಯಂ।
ಹಾಹಾಪೊಂದಿದೆನೋವರಂ ವನದೊಳಾರಂಕಾಣೆನಾಂಶಂಕರಾ॥೪೦॥

---

* ರಾಗ ಆನಂದಭೈರವಿ ಅಟತಾಳ (ಕೃಷ್ಣಸರ್ಪವು ಕಚ್ಚಿತೆನ್ನ। ಕಾಲನ್ನ॥) ಆಹವಿಧಿಯೆ ಏನಂಗೆಯ್ವೆ। ಬಹುನಿರ್ದಯದೆ॥ ನೀಂ। ಸಹಿಸಲಾರೆಯೊನಾಂ। ಮಹಿಯೊಳಿರ್ಪುದಂ॥ ಪ॥ ಓವರಾರಿಲ್ಲವೀ ಎಡೆಯೊಳ್। ಈವನದೊಳ್॥ ಓ। ಭಾವಜಾರಿ ಶಿವ। ಶ್ರೀ ವಾಮದೇವ॥ ೧॥ ನೀರಕೇಳಿಗೆಂದು ಬಂದು। ಅರಣ್ಯದಿಂದು। ಆಕ್ರೂರರಿನೊಂದಲಾ। ನೂರರೀ ವ್ಯಥೆಯಂ॥ ೨॥ ಬನ್ನಿಮಿದೆಂಕೊನಾಂಪಹಿಕಂ। ಇನ್ನೀಯಾರ್ಪಿಂ। ನಾ ನಿನ್ನೆಂದುಕಳೆದವರ! ಪನ್ನವಮುರಿವೆಂ॥ ೩॥

ರಾಜಂ॥ ( ಕೇಳಿ ) ಇದೇನು? ಸ್ತ್ರೀಯರ ರೋದನ ಧ್ವನಿ ಕೇಳಿಬರುವುದು. ಈ ನಿರ್ಜನ ಪ್ರದೇಶದಲ್ಲಿ ಅರಾಗಬಹುದು ?

ವಿದೂ॥ ಮಹಾರಾಜನೆ! ಇತ್ತಕಡೆ ಆ ಶಬ್ದವು ಕೇಳುವುದು!

ರಾಜಂ॥ ಮಿತ್ರನೆ! ಅದು ನಂದನವಿದ್ದಂತಿರುವುದು.

( ತೆರೆಯಲ್ಲಿ ) ಮೇಲಣ ಪದ್ಯದ ಎರಡನೆಯ ಚರಣವು ಕೇಳಿಬರುವುದು.

ರಾಜಂ॥ ಭಯಾರ್ಕರೆ! ಹೆದರಬೇಡಿರಿ! ಹೆದರಬೇಡಿರಿ!

ವಿದೂ॥ ಮಿತ್ರನೆ! ಇದು ಸ್ತ್ರೀಯರ ರೋದನದಂತಿದೆ ಬೇಗನೆ ಓಡು! ನೋಡು ನಮ್ಮಂತಹ ಗಂಡಸರು ಎಷ್ಟು ಶ್ರಮಪಟ್ಟರೂ ಸರಿಯೇ! ನಿನಗೆ ಸುಂದರಿಯರನ್ನು ಕಾಪಾಡುವ ಅಭಿಲಾಷೆ ಹೆಚ್ಚಲ್ಲವೆ?

ರಾಜ॥ ಮಿತ್ರನೆ! ಅಬಲರಿಗೆ ಸಹಾಯ ಮಾಡುವುದು ರಾಜಧರ್ಮವಲ್ಲವೆ?

ವಿದೂ॥ ಹಾಗಾದರೆ ನಿನಗೆ ಈಗ ರಾಜಶಬ್ದವು ಸಾರ್ಥಕವಾಯಿತು.

ರಾಜಂ॥ ಮಿತ್ರನೆ ನಿನ್ನ ಪರಿಹಾಸ್ಯವಚನಕ್ಕೆ ಇದು ಸಮಯವಲ್ಲವು. ಸ್ವಲ್ಪ ಹೊತ್ತು ಸುಮ್ಮನಿರು!

ವಿದೂಷಕ॥ "ಅಜ್ಜಿಗೆ ಅರಿವೆಚಿಂತೆ, ಮಗಳಿಗೆ ಮದುವೆಚಿಂತೆ" ಎಂಬ ಗಾದೆಗೆ ಸರಿಯಾಗಿ, ನಿನ್ನ ಆಲೋಚನೆ ನಿನ್ನದು! ನನ್ನ ಆಲೋಚನೆ ನನ್ನದು! ಮಹಾರಾಜ! ಒಂದು ಮಾವಿನ ಹಣ್ಣನ್ನಾದರೂ ತರಿಸಿಕೊಡು!

ರಾಜಂ॥ ಮಿತ್ರನೆ! ಸಲ್ಪ ಸಮಾಧಾನವಂತನಾಗು! ನಮ್ಮ ಪರಿಜನರು ಬರಲಿ! ನಿನಗೆ ಬೇಕಾದ ಸುಖವನ್ನುಂಟು ಮಾಡುವೆನು.

ವಿದೂ॥ ನನಗೆ ಇನ್ನೇನು ಸುಖವೂ ಅವಶ್ಯಕವಿಲ್ಲವು. ಮಹಾರಾಜಾ, ಹೊಟ್ಟೆಯ ತುಂಬಾ ರುಚಿಯಾದ ಭೋಜನವು ಸಿಕ್ಕಿದರೆ ಸಾಕು! ಉಳಿದ ಎಲ್ಲಾ ಸುಖವೂ ನಿನಗೇ ಇರಲಿ!

ರಾಜಂ॥ ಮಿತ್ರನೆ! ಹಾಗಾಗಲಿ!

( ತೆರೆಯಲ್ಲಿ )

ಅಯ್ಯೋ! ದುರ್ದೈವವೇ! ನಿರ್ಜನವಾದ ಅರಣ್ಯದಲ್ಲಿ ಇಂತಹ ವ್ಯಥೆಗೆ ಗುರಿ ಮಾಡಿದೆಯಾ! ಹಾ ಹಾ! ಶಂಕರಾ! ಭವಹರ! ( ಎಂಬುದನ್ನು ಕೇಳಿ )

ಕಂದ|| ಬಂದೆ ನೀನೆಲ್ಲಿರ್ಪೆಯೊ ।
ದಂದುಗವಮಂ ಕಳೆವೆ ನೀಗಳಾಂಪುದುಧೃತಿಯಂ ||
ಅಂದುವೊಳಾನಿರ್ಪೆಂ ನಿ ।
ಮ್ಮಂದರ್ಶಿಸಲೆನಗೆ ಪೂರ್ವಪುಣ್ಯಾವಮದುಂಟೇ? || ೪೧ ||

ರಾಜಂ|| ಇತ್ತಕಡೆ ಆ ಶಬ್ದವು ಕೇಳಬರುವದು. ನೋಡುವೆನು. (ಎಂದು ಹೊರಟು ಹೋದನು.)

ವಿದೂ || ಇನ್ನೇನು! ಹೊರಟೇ ಹೋದನು! ಮತ್ತೆಯೂ ನಾನೊಬ್ಬನೇ ಉಳಿದು ವ್ಯಥೆಪಡುವುದಾಯಿತಲ್ಲಾ? ತೊತ್ತಿನ ಮಕ್ಕಳಾದ ಆ ಜೇಟೆಗಾರರ ಮೊತ್ತ ವಿತ್ತಕಡೆ ಬರುತ್ತಿರುವಂತೆ ತೋರುತ್ತಿರುವದು. ಅವರ ಜತೆಯನ್ನಾದರೂ ಸೇರಿಕೊಳ್ಳುವೆನು. "ರಾಜರ ಚಿತ್ತಭೂಜದ ನೆರಳು!" ಎಂಬ ಗಾದೆಯಂತೆ ರಾಜನನ್ನನುಸರಿಸಿದ ನನಗೆ ಚಿರಸುಖವೆಲ್ಲಿಯದು? ಅಥವಾ ನನ್ನ ದುರ ದೃಷ್ಟವು ಹೀಗಿದ್ದರೆ ರಾಜನನ್ನು ತಾನೆ ಏಕೆ ದೂರಬೇಕು! ನವನಿಧಿಗಳಿ ಗೊಡೆಯನಾದ ಕುಬೇರನು ತನ್ನ ಆಪ್ತಮಿತ್ರನಾದರೂ ಶಿವನು ತಲೆಯು ಬುರುಡೆಯನ್ನು ಹಿಡಿದುಕೊಂಡು ತಿರುಪೆಯನ್ನೆತ್ತಬೇಕಾಯಿತು! ಸಂಪತ್ತಿಗ ಧಿದೇವತೆಯಾದ ಶ್ರೀಯನ್ನೇ ತನ್ನ ವಕ್ಷಸ್ಥಲದಲ್ಲಿರಿಸಿಕೊಂಡಿದ್ದರೂ ಶ್ರೀಮ ನ್ಮಹಾವಿಷ್ಣುವು ಕುಬೇರನಲ್ಲಿ ಸಾಲಮಾಡಿ ಕಷ್ಟಪಡಬೇಕಾಯಿತು! ನಾನೆ ಷ್ಟರವನು! ಆ! ನನಗಿದ್ದಷ್ಟು ಹೊಟ್ಟೆ, ಹದಿನಾಲ್ಕು ಲೋಕಂಗಳಡಗಿರುವ ಉದರವುಳ್ಳವನಾದ ವಿಷ್ಣುವಿಗಿರುವದೇ! (ಎಂದುಕೊಂಡು ಹೊರಟು ಹೋದನು),

(ಬಳಿಕ ಯಯಾತಿ, ದೇವಯಾನಿಯೊಡನೆ ಪ್ರವೇಶಿಸುವನು).

ರಾಜಂ || ಕಂ || ಇಂದು ನಿ ಭಾನನೆ ರತಿಸಮ ।
ಸುಂದರಿ ನೀಂ ಜನವಿಹೀನ ವಿಪಿನಾಂತರವ ||
ನ್ನೊಂದುತೆ ಕುಳಿಯೊಳ್ ಬೀಳ್ದೀ ।
ದಂದುಗಕೆಡೆಯಾದ ಬಗೆಯನೆನ್ನೊಳಗುಸಿ ಕಾ || ೪೨ ||

ದೇವ|| ಮಹಾತ್ಮನೆ! ನಾನೋರ್ವರಾಕ್ಷಸಿಯ ದೆಸೆಯಿಂದ ಹೀಗೆ ವ್ಯಥೆಯನ್ನೊಂದಬೇಕಾಯಿತು.

ರಾಜಂ|| ಮಂಗಳೆ! ನೀನಾರಮಗಳು? ಎಲ್ಲಿರುವವಳು? ಆರಿಂದ ಈ ಕಷ್ಟವು ಹೊಂದಿಸಲ್ಪಟ್ಟಿತು.

ದೇವ॥ ‡ ವೃ॥ ನರವರದೀನೆಯಾದೆ ನತಿಹೀನತೆಯಾಂತೆ ನಮರ್ತ್ಯವಿದ್ವಿಷ॥
ದ್ಗುರುತನುಜಾತೆ ಯೆಂದೆನಿಸಿ ದಾನವಿಯಿಂ ಸಖಿಯಿಂದ ಮಾಂತೆದು ॥
ಸ್ತರದುರುಬಾಧೆಯಂ ವಿಜನಕಾನನಮಧ್ಯದೆ ದೇವಯಾನೆಯೆಂ ।
ದೊರೆವರನಂಗರೂಪ! ತವನಾಮನಿವಾಸಗಳೊಲ್ದು ಪೇಳ್ವುದೈ ॥ ೪೩ ॥

ರಾಜಂ॥ ಮಾನಿನೀಮಣಿ! ಆ ದಾನವಿ ಯಾರು.

ದೇವ॥ ವೃಷಪರ್ವನೆಂಬ ರಾಕ್ಷಸಪತಿಯೊಬ್ಬನಿರುವನು. ಆತನ ಮಗಳೇ ಆ ಶರ್ಮಿಷ್ಠೆ!

ರಾಜಂ॥ ( ಕೋಪದಿಂದ ) ಕಂ॥ ಕೊಲ್ಲುವೆನವನಂ ಸುತೆಯೊಡ ।
ನೆಲ್ಲಿರ್ದೊಡಮಾರ ಕಾಪಿನಲ್ಲಿರ್ದೊಡಮಾಂ ॥
ಸಲ್ಲಲಿತಾಂಗಿಯೆ ಪೇಳಾ ।
ಖುಲ್ಲರದೆಲ್ಲಿರ್ಪರವರನುಳಿ ಸೆಂಭುವಿಯೊಳ್ ॥ ೪೪ ॥

ದೇವಯಾನೆ॥ ಮಹಾತ್ಮನೆ! ಅತಿ ದಯಾರ್ದ್ರಚಿತ್ತನಾದ ನಿನ್ನಿಂದ ಈ ಕಾರ್ಯವಾಗ ಕೂಡದು. ಆ ದುರಾಚಾರೆಗೆ ಮಹನೀಯನಾದ ನನ್ನ ತಂದೆಯಿಂದ ನಾನೇ ಶಿಕ್ಷೆಯನ್ನು ಮಾಡಿಸುವೆನು. ನಿನ್ನಿಂದ ಉಪಚರಿಸಲ್ಪಟ್ಟ ನಾನು ನಿನಗೆ ವಿಧೇಯಳಾಗಿರುವೆನು. ಈ ತಂಪಾದ ಶಿಲಾಪೀಠದಲ್ಲಿ ಕುಳಿತು ವಿಶ್ರಮಿಸಿಕೊಳ್ಳಬೇಕು.

ರಾಜಂ॥ ಇನ್ನು ನಾನು ಹೊರಡುವೆನು. ಪರಸ್ತ್ರೀಯರ ಬಳಿಯಲ್ಲಿ ಬಹಳ ಹೊತ್ತು ಮಾತನಾಡುತ್ತಿರಬಾರದು. ( ಎಂದು ಹೊರಟು ಹೋದನು. )

ದೇವಯಾನೆ§ ( ವ್ಯಸನದಿಂದ ) ಅಹ! ಗುರುಪುತ್ರನಿಂದ ನಿಂದಿತೆಯಾದ ನನಗೆ ಅಪ ಶದೆಯುರಿಂದ ಅತ್ಯಂತವಾದ ವ್ಯಥೆಯೊಂದಿಸಲ್ಪಟ್ಟಿತು. ಅದು ಪರಿಹೃತವಾ

---

‡ ರಾಗ ಖರಹರಪ್ರಿಯ ಆದಿತಾಳ ( ಅನುತಾಪವೇನಿದು । ಅನಿಮಿತ್ತವಾಗಿ )
ಏನೆಂದು ಪೇಳ್ವೆನೊ । ಮಾನವಾಗ್ರಣಿಯೆ ॥ ದೀನಳಾದೆನು ಮತಿ । ಹೀನಳಾ ದೆನುನಾ ॥ ಪ ॥ ದಾನವಗುರುಸುತೆ । ಯಾನಾಗುತಿಂತು ॥ ದಾನವಿಯಿಂವ್ಯಥೆ । ಯಾನುವಂತಾಯ್ತೈ ॥ ೧ ॥ ಇಷ್ಟಳಾಗಿರ್ದಶ । ರ್ಮಿಷ್ಠೆಯೆಂದೆಂಬ ॥ ಭ್ರಷ್ಟ ಳೆನ್ನನಿಂತು । ಕಷ್ಟಕೊಂದಿಸಿದಳ್ ॥ ೨ ॥ ದೀನಪಾಲನೆದೇವ । ಯಾನೆಯೆಂ ದೆಂಬರ್ ॥ ಏನಾದರೇ ನೀಗೆ । ಹೀನತೆಯಾಂತೆಂ ॥ ೩ ॥ ನಿನ್ನ ಗುಣಂಗಳ್ । ಸನ್ನುತಮ ಹವೈ ॥ ನಿನ್ನಾವಾಸಾಖ್ಯೆಗ । ಳನ್ನೊರೆಹಿತದಿಂ ॥ ೪ ॥
§ ರಾಗ ಚಂದ್ರಕಾಂತ, ಆದಿತಾಳ ( ಪಲುಕವದೇಮಿನಾ । ದೈವಮಾರಾಮಾ॥ )
ಸೈಸಲಾರೆನೇ । ಸಂಕಟವನಾಹ ॥ ಅಶರೆಯಿಂದಾಂ । ಘಾಸಿಯಾಂತೆನೇ ॥ ಪ ॥ ಗುರುತನೂಜಗಾಗಿ । ಕರೆಕರೆಯನೊಂದಿ ॥ ಹರಣಮಾಂತಿರ್ದೆನ । ಗಿರದಿಂತೀ

ಗಲು ಮತ್ತೊಂದು ವ್ಯಥೆಯುಂಟಾಯಿತು! "ದುಃಖಂ ದುಃಖೈಸ್ತಿರೋಧೀಯತೆ" ಎಂಬುದು ಸುಳ್ಳಲ್ಲವು! ಈಗ ಏನನ್ನು ತಾನೆ ಮಾಡಲಿ? ಹಾ ಹಾ! ಪಾಪವಿಧಿಯೆ! ಕಾಪಾಡು!

ವೃ॥ ಬಿದುವಂ ನಾಣ್ಚಿಪಸುಂದರಾನನ ಮನಂಗಂಮತ್ತಮಿೀ ಲೋಕದ ।
ಲ್ಲಿದಿಸಿರ್ಪಂ ನಿಜಮೆಂಬ ಪಾಂಗಿನೊಳಿರಲ್ಕತ್ಯಂತಸದ್ರೂಪವಾ ॥
ಮದಶುಂಡಾಲಕರಂ ಬೊಲಿರ್ಪವರಬಾಹುದ್ವಂದ್ವಮಿಂತಿರ್ಪನಿಂ ।
ಮುದವಾಂತೊಪ್ಪುವಭಾಗ್ಯಮುಂಸುಕೃತಮುಂತಾನುಂಟೆಪೂರ್ವಾ
ರ್ಜಿತಂ ॥ ೪೫ ॥

ಹಾ ಹಾ! ವಿಧಿಯೇ! ಸುಂದರಾಂಗನಾದ ಚಕ್ರವರ್ತಿ ಲಕ್ಷಣಂಗಳುಳ್ಳವನಾದ ಗುರುಪುತ್ರನ ಶಾಪದಿಂದೆನಗೆ ಅನುರೂಪ ವರನಾದ, ಈತನನ್ನಾದರೂ ವರಿಸಿ ಸಂತೋಷದಿಂದಿರುವೆನೆಂದರೆ, ಇದಕ್ಕೂ ವಿಘ್ನಕಾರಿಯಾದೆಯು! ನಿನ್ನನ್ನು ತಾನೆ ಏತಕ್ಕೆ ದೂರಬೇಕು? ನನ್ನ ಪೂರ್ವ ಕರ್ಮವೇ ನನ್ನನ್ನು ಬಾಧಿಸುತ್ತಿರುವುದು? ಹಾಗೆಯೇ ಸರಿ!

ಕಂ ॥ ಜಗದಲ್ಲಾರಯೆಲೀ ಜೀ।
ವಿಗಳನಿಶಂ ಮಾಳ್ಪಕಜ್ಜ ಕನುರೂಪಫಲಂ ॥
ಬಿಗೆವುದು ನೋಡಲ್ ನಿಕ್ಕುವ ।
ಮೊಗೆವುದೆ ಕಗ್ಗಲಿಯ ತರುವೊಳಂಬುಜ ಪುಷ್ಪಂ ॥ ೪೬ ॥

ಇದಂತಿರಲಿ! ಆ ದುಷ್ಟ ರಾಕ್ಷಸಿಗೆ ತಕ್ಕ ಶಿಕ್ಷೆಯನ್ನು ಮಾಡಿಸುವೆನೆಂದರೆ, ನಾನು ಆ ನೀಚಳಿಂದ ಅವಮಾನವನ್ನು ಹೊಂದಿ ಮತ್ತು ಅವಳಿರುವೆಡೆಗೆ ಹೇಗೆ ಹೋಗಲಿ? ದಿಕ್ಕೇ ತೋರದಾಗಿದೆ. ನಮ್ಮ ತಂದೆಗೆ ಹೇಳಿ ಕಳುಹಿಸುವೆನೆಂದರೆ ನನ್ನ ಸಖಿಯರು ಕೂಡಾ ಆರೂ ಇಲ್ಲವು. ನಿರ್ಭಾಗ್ಯಯಾದ ನನಗೆ ಸಖಿಯಾರು?

( ಎಂದು ಹೊರಟು ಹೋದಳು. )

ದ್ವಿತೀಯಾಂಕಂ ಮುಗಿದುದು.

ಶ್ರೀರಾಮಂ.

---

ಗಳಾಯ್ತೇ ॥ ೧ ॥ ನಂದವನ್ನು ನಾನು । ಪೊಂದುವೆನದೆಂದೊ ॥ ಎಂದಿಗೆನ್ನೆ ರ್ದೆಯಾ । ದಂದುಗವತೊರೆಪೆಂ ॥ ೨ ॥ ಪಾಪಿವಿಧಿನಿನ । ಗೇಪರಿಮನವಾಯ್ತೋ॥ ತಾಪವೀಯಲಿಂತು । ಕಾಪಾಡು ಕಾಪಾಡು ॥ ೩ ॥

# ತೃತೀಯಾಂಕಂ.

( ಇಬ್ಬರು ಸಖಿಯರು ಪ್ರವೇಶಿಸಿ)

೧ನೆಯವಳು (ಆತುರದಿಂದ ಹೋಗುತ್ತಿರುವ ಎರಡನೆಯವಳನ್ನು ಕುರಿತು) ಏನು ಪ್ರಿಯೆ! ಇಷ್ಟು ಆತುರದಿಂದ ಹಿಂದುಮುಂದು ನೋಡದೆ ಪ್ರಯಾಣ ಮಾಡುತ್ತಿರುವೆ? ಕೆಲದಲ್ಲಿ ನಿಂದಿರುವ ನನ್ನನ್ನು ನೋಡುವದಕ್ಕೂ ಕೂಡಾ ಇಷ್ಟವಿಲ್ಲವೋ? ಅದೇನು? ಅಷ್ಟು ಕಾರ್ಯತತ್ಪರತೆ?

೨ನೆಯವಳು ಪ್ರಿಯೆ! ಏನೆಂದು ಹೇಳಲಿ? ಪ್ರಾಣಕಲ್ಪೆಯಾದ ನಿನ್ನೊಡನೆ ಮಾತಾಡುವುದಕ್ಕೆ ನಿಂತರೆ ಹೊತ್ತು ಹೋಗುವುದೆಂದೆಳಸಿರುವೆನು!

೧ನೆಯವಳು॥ ಪ್ರಿಯೆ! ಘೂರ್ಣಿಕೆ! ನಿನ್ನ ಕಷ್ಟಸುಖಕ್ಕೆ ನಾನೂ ಭಾಗಿನಿಯಲ್ಲವೆ? ಹೇಳು! ದಯೆಯಿಡು! ನಾನೂ ಸಹಾಯಕಳಾಗಿರುವೆನು!

೨ನೆಯ॥*ವೃ॥ಪಿತನಾಜ್ಞಪ್ತಿಯ[illegible]ಂತುಮತ್ಸಖಿಸಖೀಸಂದೋಹದಿಂನಂದನ।
ಕ್ಕತಿವೋದಂತಳೆದೈದಿದಳ್ ತರಳೆ ತಾನೀಪೊಳ್ತಿಗುಂ ಬಾರದಾ ॥
ಕತಮೇನೆಂದುರು ಚಿಂತೆಯಿಂದೆನಗೆ ನೋಡಲ್ಕಾರ್ಯ ನಿತ್ರಿರ್ಪನಾ ।
ಣತಿಯಂ ತಾನರಸಲ್ಕೆ ಪೋಪೆನಿದೊಮಾತಾಡಲ್ಕೆತಳ್ವೆಪ್ಪುದ್ ॥ ೪೭ ॥

೧ನೆಯವಳು॥ ಪ್ರಿಯೆ! ಸ್ವಲ್ಪ ನಿಲ್ಲು! ಮಹಾತ್ಮನಾದ ಆಕೆಯ ತಂದೆಗೆ ತಿಳಿದಿಲ್ಲವೇ? ಯೋಗದೃಷ್ಟಿಯಿಂದ ನೋಡದೆ ಇರುವನೆ? ನಾಡಾಡಿಯಂತೆ ನಿನ್ನನ್ನು ಹುಡುಕುವುದಕ್ಕೆ ಕಳುಹಿದನೋ? ಮಹಾತ್ಮರ ಮನಸ್ಸನ್ನು ಹೇಗೂ ತಿಳಿಯಕೂಡದು!

---

* ರಾಗ ತೋಡಿ, ರೂಪಕತಾಳ ( ಮೋಹಮುನೇತಾಳಲೇರಾ ॥ )
ಏನನೊರೆಯುವೆನಾಹ। ಮಾನಸದವ್ಯಥೆಯೀಗ ॥ ಪ ॥ ಮೋದದಿಂದ ನೀರಕೇಳಿ। ಯಾದವಿಚ್ಛೆ ಸುತ್ತೆಕ್ರ ॥ ವ್ಯಾದಸುತೆಯರಿಂದೆಕೂಡು। ತ್ಯೈದಿದಳುನಂದನಕ್ಕೆ ॥ ೧ ॥ ಪಿತನಿನಾಜ್ಞಪ್ತಳಾಗು। ತತಿಕುತುಕದಿಂದ ತಾಂ ॥ ಹಿತದೆವನವಪೋದಳಂತೆ। ಕತವದೇನೊಬಾರದಿರೆ ॥ ೨ ॥. ಪುಡುಕಲೆನ್ನನಟ್ಟದಕೆ। ತ್ರಡಿಯನಿದೇಶದೆಪೋಪೆಂ ॥ ಮುಡಧಿಯೆಮಾತಾಡಲುಳಿಯೆ। ತಡಮುದಪ್ಪುದೆಂಬಭಯದೆ ॥ ೩ ॥

೨ನೆಯವಳು॥ ಸಖಿ! ಹಾಗೆ ದಿವ್ಯ ದೃಷ್ಟಿಯಿಂದ ನೋಡಿದರೂ, ಅಂತಹ ವಿಷಯಗಳನ್ನು ಸದಾಪ್ರಕಟಿಸುತ್ತಿದ್ದರೆ ತಮ್ಮ ಮಾಹಾತ್ಮ್ಯಕ್ಕೆ ದುರ್ಜನರಿಂದ ಕುಂದುಂಟಾಗುವುದೆಂಬ ಭಯದಿಂದ ಮಹಾತ್ಮರು ಏನೂ ಅರಿಯದವರಂತೆಯೇ ಇರುವರು! ಮತ್ತು ದೈವೇಚ್ಛೆಯಿಂದ ನಡೆಯುವ ಕಾರ್ಯಂಗಳಿಗೆ ತೊಂದರೆಯನ್ನು ಮಾಡುವುದಕ್ಕೆ ಆರಿಗೆ ಸಾಧ್ಯವು? ಅವರವರ ಕರ್ಮಫಲವನ್ನು ಅವರು ಅನುಭವಿಸಿಯೇ ತೀರಬೇಕು!

೧ನೆಯವಳು॥ ಅಹುದು! ಮಹಾತ್ಮರು ಸರ್ವಜ್ಞರಲ್ಲವೆ?

೨ನೆಯವಳು॥ ಪ್ರಿಯೆ! ನಮ್ಮ ಸಖಿಯಾದ ದೇವಯಾನೆಯು ಗತಿಯನ್ನೂ ಇರುವ ಸ್ಥಳವನ್ನೂ ಆತನು ತಿಳಿದಕಾರಣವೇ ಆಗಬಹುದು! ನನ್ನನ್ನೂ ಸುಂದರ ನಂದನದ ಕಡೆಗೆ ಹೋಗಿಬಾರೆಂದು ಹೇಳಿದನು!

೧ನೆಯವಳು॥ ಆಕೆಯೊಡನೆ ಹೋಗಿದ್ದವರಿನ್ನೂ ಬಂದರೋ ಇಲ್ಲವೋ?

೨ನೆಯವಳು॥ ಬಂದಿರುವರು ಪ್ರಿಯೆ! ಅವರನ್ನು ಕೇಳಿದರೆ ತಾವು ಕಾಣೆವೆಂದೇ ಹೇಳುವರು!

೧ನೆಯವಳು॥ ಇರುವುದು!

ಕಂ॥ ಉರಗನೊಡನಾಡುವುದರಿಂ ।
ದುರುಳರ ಮಿತ್ರತೆಯೆ ಪರಮದುಃಖಮ ನೀಗುಂ ॥
ಹರಿಸುಗುಮುರಗಂಕಚ್ಕರ್ತು ।
ಮರಿವಿಲ್ಲದ ಪಾಂಗಿನಿಂದೆಕೆಡಿಪರ್ ನೀಚರ್ ॥ ೪೮ ॥

೨ನೆಯವಳು॥ ಪ್ರಿಯೆ! ನಿನ್ನ ವಾಕ್ಯವು ನಿಶ್ಚಯವಾದುದು! ಈಗ ಏನು ಮಾಡತಕ್ಕದು? ಎಲ್ಲೆಲ್ಲಿ ಹುಡುಕಿದರೂ ರಮಣೀಮಣಿಸಿಕ್ಕಲಿಲ್ಲವಲ್ಲಾ! ನೀನು ಹೇಳಿದಂತೆ ನೀಚರಿಂದ ಕೆಡುಕಾಗಿರಬಹುದೆಂದು ಊಹಿಸುವುದಕ್ಕೆ ಕಾರಣವಿರುವುದು!

೧ನೆಯವಳು॥ ಇರುವುದು!

ಕಂ॥ ಗುರುಸುತನಂ ಕಚನಂ ಸುಂ ।
ದರನಂ ನಾಲ್ಕೈದುಬಾರಿ ಸಂಹರಿಸಿರೆಮು ॥
ದ್ಗುರುವರ ಶುಕ್ರಾಚಾರ್ಯಂ ।
ವರಮಂತ್ರದೆ ಬದುಕಿಸಿರ್ದುದನು ವಿಖ್ಯಾತಂ ॥ ೪೯ ॥

೨ನೆಯವಳು॥ ಆ ನೀಚರಾದ ರಾಕ್ಷಸರು ಈಗಲೂ ಹಾಗೆಯೇ ನಡೆಯಿಸಿರಬಹುದೇ?

೧ನೆಯವಳು॥ ಅವರ ವರ್ತನೆಗಳಿಂದ ನನಗೇನೋ ಹಾಗೆಯೇ ತೋರುವುದು!

೨ನೆಯ॥* ಸಖಿ ಯೆಲ್ಲಿರ್ದಪೆ ಪೋದೆಯೆಲ್ಲಿಗೆ ಸದಾನಿನ್ನಂಫ್ರಿಯಂ ಬಿಟ್ಟಿರಲ್।
ಶಿಖಿಯಿಂಬೆಂದಪ್ಪೊಲಾಗುತಿರ್ದುದುಮನಂ, ಪ್ರಾಣಂಗಳಿಂದಿರ್ಪೆಯಾ! ॥
ಸುಖದಿಂ ಮಂದಿರದೊಳ್ ಮುದಂದಳೆದು ನೀನಿರ್ಪಂದಮಂಬಿಟ್ಟುದೈ ।
ತ್ಯಖಿಲಸ್ತ್ರೀ ಗಣದಿಂದೆ ಪೋಗಿದುಗುಡಂ ಗೊಳ್ಳುತ್ತಿದೇಂಗೆಯ್ವೆಯೋ ॥ ೫೦ ॥

(ಅಂಗಚಲನವನ್ನು ಸೂಚಿಸಿ) ಪ್ರಿಯೆ! ಇದೇನು? ನನ್ನ ಎಡದಕಣ್ಣದಿರುವುದು! ಮತ್ತು ಗರುಡಪಕ್ಷಿಯು ಪುರೋಭಾಗದಲ್ಲಿ ಬಲದಿಂದ ಎಡಕ್ಕೆ ಪ್ರದಕ್ಷಿಣವಾಗಿ ಅಂತರಿಕ್ಷದಲ್ಲಿ ಸುತ್ತುತ್ತಿರುವುದು!

೧ನೆಯುವಳು॥ ಸಖಿ! ಇದು ಶುಭಶಕುನವೆಂದು ಶುಕ್ರಾಚಾರ್ಯರಿಂದ ಕೇಳಿರುವೆನು! ಈಗ ನಮ್ಮ ಸಖಿ ಸಿಕ್ಕುವಳಾಗಬಹುದು!

೨ನೆಯುವಳು॥ ಪ್ರಿಯೆ! ಇನ್ನು ನಿಲ್ಲಲಾರೆನು! ಕಾರ್ಯತತ್ಪರತೆಯು ನನ್ನನ್ನು ತ್ವರೆಗೊಳಿಸುವುದು!

೧ನೆಯುವಳು॥ ಸಖಿ! ನಡೆ ನಾನೂ ಬರುವೆನು!

೨ನೆಯುವಳು॥ ಪ್ರಿಯೆ! ನೀನು ಬೇರೆ ಏನೋ ಕಾರ್ಯಕ್ಕಾಗಿ ಹೊರಟದ್ದೆಯಲ್ಲವೆ?

೧ನೆಯುವಳು॥ (ಸ್ಮರಿಸಿ) ಅಹುದು, ಸಖಿ! ತನ್ನ ಮಗಳಾದ ಶರ್ಮಿಷ್ಠೆಯ ಅಲಂಕಾರಕ್ಕೋಸ್ಕರ ದಿವ್ಯಮಾಲ್ಯಾಂಬರಗಳನ್ನು ತೆಗೆದುಕೊಂಡು ಬರುವಂತೆ ರಾಜ್ಞಿಯಿಂದಾಜ್ಞಪ್ತಳಾಗಿದ್ದೆನು. ನನ್ನ ಸಖೀವಿಯೋಗದಿಂದ ಅದನ್ನು ಮರೆತು ರಾಜ್ಞಿಯಾಜ್ಞೆಗೆ ಗುರಿಯಾಗುತ್ತಿದ್ದೆನಲ್ಲಾ? ನಿನ್ನಂತಹ ಸತ್ಸಖಿಯರೊಡನಾಡುವುದರಿಂದ ಅಂತಹಕಷ್ಟಗಳು ಸಂಭವಿಸವು. ಹಾಗೆಯೇ ಸರಿ.

---

* ರಾಗ ಹಿಂದೂಸ್ಥಾನಿ ಕಾಪಿ (ಅಹ-ಪಿತನೆ-ನುತನೆ-ಹಿತನೆ-ಶುಭಗುಣ-ಯುತನೆ॥) ಅಹ ಸಖಿಯೇ ವಿಧುಸ ಮುಖಿಯೇ। ಸುಖದಾಯತಿಯೇ॥ ಪ॥ ಎಲ್ಲಿಗೆ ಪೋಗಿಹೆ। ಎಲ್ಲಿ ನೀನಿರುತಿಹೆ ॥ ಯೊಲ್ಲದೆಯೆಮ್ಮೊಳಿಗೆ। ಜಾರೆ ತೋರೆ ಮೋರೆ ನೀರೆ ॥ ೧ ॥ ಕಾಮನಪಟ್ಟದ। ಸಾಮಜವೆದುಷ್ಟ। ಕಾಮಿನಿಯರಿನೇಗಿ। ಪೋಗಿ-ಸೊಗ-ವಿೂಗ-ನೀಗಿ ॥ ೨ ॥ ಎಂತಿಹೆಂ ನಿನ್ನಳಿ। ದಂತರದಾಳೀ ॥ ಸಂತಸವನೀಡೆಲೆ। ಬಾಲೆ-ಶೀಲೆ-ಲೀಲಾ-ಲೋಲೆ ॥ ೩ ॥

ಕಂ ॥ ನಿರುಕಿಸುತನ್ಯರ ಬೇನೆಯು ।
ನುರೆದುಗುಡಮನಾಂತು ಹಿತಮನೆಳಸುವರಮಳರ್॥
ಶಿರವಾನಿಸಿ ಖರಕಿ ರಣಂ ।
ಗುರುಸುಖಮಂ ಶ್ರಿತಜನಕ್ಕೆಕುಡವ ಕುಜಂಬೊಲ್ ॥ ೫೧ ॥

ಪ್ರಿಯೆ! ಅಜ್ಞಪ್ತಕಾರ್ಯವನ್ನು ನೆರವೇರಿಸಿಕೊಂಡು ನಾನೂ ಬರುವೆನು; ನೀನು ಹೊರಡುವಳಾಗು! ( ಎಂದಿಬ್ಬರೂ ಹೊರಟು ಹೋದರು. )

ಅರಣ್ಯದಲ್ಲಿ ದೇವಯಾನೆ ಪ್ರವೇಶಿಸಿ)

ಅಯ್ಯೋ! ಏನು ಮಾಡಲಿ? ನಿರ್ಜನವಾದ ಅರಣ್ಯದಲ್ಲಿ ಆರನ್ನಾಶ್ರಯಿಸಲಿ? ನಿರಾಶ್ರಯರಿಗೆ ಆಶ್ರಯರಾರು? ಜಗತ್ಪತ್ತಿಯೋ! ಆದುದರಿಂದ ನನ್ನ ಇಷ್ಟದೇವರನ್ನೂ ಧ್ಯಾನಿಸುವೆನು! ( ಎಂದು ಕೈಮುಗಿದು. )

* ವೃ॥ಶ್ರೀಗೌರೀಮುಖ ನೀರಜಾತಮಿಹಿರಾ ಗಂಗಾಧರಾ ಶಂಕರಾ ।
ಯೋಗೀಂದ್ರಾತ್ಮಕುಶೇಶಯಾಳಿ ಗಿರಿಶಾ ಕಾಲಾಂತಕಾ ತ್ರ್ಯಂಬಕಾ॥
ನಾಗೇಂದ್ರಾಜಿನಭೂಷಣಾ ಕರಧೃತೈ... ಶಿಷ್ಟಸಂರಕ್ಷಣಾ ।
ನೀಗೈಮದ್ವ್ಯಥೆಯಂದಯಾಲಯಸುರಸ್ತುತ್ಯಾಂಘ್ರಿಪದ್ಮದ್ವಯಾ॥೫೨॥

ಮಹಾದೇವಾ! ಸಂರಕ್ಷಿಸು! ರಕ್ಷಿಸು!!

ಘೂರ್ಣಿಕೆ॥ ( ನೈಪಥ್ಯದಲ್ಲಿ ) ಇದೇನು? ನನ್ನ ಸಖಿಯ ಧ್ವನಿಯಂತೆಯೇ ಇರುವುದು. ನೋಡುವ!

( ಪ್ರವೇಶಿಸಿ-ಪ್ರಕಾಶಂ ) ಎಲೌ ಪ್ರಿಯೆ! ಇದೇ ನಿಂತು ಚಿಂತೆಯಾಂತಿರುವೆ? ರೋಹಿಣೀಕಾಂತನಂ ಪೋಲುವ ಮುಖವು ಕಳೆಗುಂದಿದೆ! ಕಾರಣವೇನು? ಸೀತಾಂಬರಾದಿ ದಿವ್ಯ ವಸ್ತ್ರಾಲಂಕೃತಳಾಗಿರುತ್ತಿದ್ದ ನಿನಗೆ ಈ ಕಾರ್ಪಾಸವು ಹೇಗೆ ಬಂದಿತು?

---

* ರಾಗ ಬಿಲಹರಿ ಆಟತಾಳ ( ಕರುಣದೆ ಕಾಯೊ ಶ್ರೀಹರಿಯೇ ॥ )
ದಯದೆ ಪಾಲಿಸು ಶಂಕರನೇ ಮೃತ್ಯುಂ । ಜಯಗಿರಿ ಜಾನನಕಜಖರಕರನೇ ॥
ವಿಯತ್ಕೇಶ ಚಂದ್ರಶೇಖರನೇ ಭವ । ಭಯನಿವಾರಣ ಶಿವ ಗಂಗಾಧರನೆ॥ ಪ ॥
ಕಮನೀಯ ವೃಷಭ ತುರಂಗ । ವರ। ವಿಮಲ ಮುನಿಜನಗೇಯ ಭಸ್ಮಾಂಗ ॥
ಸೈನೆಸೊ ಈ ಭಂಗ । ದಯಾ । ಸಮುದ್ರನೊರೆಯೆನ್ನ ಸುಗುಣೋತ್ತುಂಗ॥ ೧ ॥
ನಿನ್ನ ಪಾದವನೆ ನಂಬಿಹೆನೋ । ಲೋಕ । ಸನ್ನುತ ಶ್ರಿತಜನ ರಕ್ಷಿಪ ನೀನೋ॥
ಗನ್ನ ಬಸನವೊಂದಿಹೇನೋ । ಆ।ಪನ್ನ ಪಾಲಕಪೊರೆವೂಜ್ಯನುನೀನೋ॥ ೨॥

ಕಂ ॥ ಸಹಿಸೆಂ ನಿನ್ನಂ ನೋಡುತೆ ।
ಮಹಿಳಾಮಣಿಪೇಳದಾರದೆಸೆಯಿಂದಾಯ್ತೀ ॥
ಬಹು ಪರಿತಾಪದ ದುರ್ವ್ಯಥೆ।
ಯುಹಹಾ ಕಂಡಿರ್ಪನೆಂತೊ ಕಣ್ಣೊಡೆಯದೆಹಾ ॥ ೫೩ ॥

ದೇವ॥ಪ್ರಿಯೆ! ನೀನು ನನಗೆ ಅತ್ಯಂತ ಪ್ರಿಯಕಾರಿಣಿಯಾದರೂ ನಿನಗೆ ಮುಖವನ್ನು ತೋರಿಸುವುದಕ್ಕೇ ನಾಚಿಕೆಯಾಗುವುದು! ಹಾ ಹಾ! ಈ ಜೀವವಿನ್ನೇತರ್ಕೆ?

ಘೂರ್ಣಿಕೆ॥ಸಖಿ! ಸಮಾಧಾನವಾಂತವಳಾಗು! ನಿನಗೆ ಈ ದುರ್ವ್ಯಥೆ ಯಾರಿಂದಾಯಿತೋ ತಿಳುಹಿಸು! ಅವರಿಗೆ ತಕ್ಕ ಶಿಕ್ಷೆಯನ್ನು ಮಾಡಲು ಪ್ರಯತ್ನಿಸುವೆನು!

ದೇವ॥ ಕಂ॥ ಸಖಿಯಂತಿರ್ದಾ ಪಂಕಜ ।
ಮುಖಿಯಾ ಶರ್ಮಿಷ್ಠೆಯಧಿಕ ಕೋಪದೆ ತನ್ನಾ ॥
ಸಖಿಯರಿನೊಡಮೆನ್ನು ಮನೀ ।
ಮುಖದಿಂ ದುಃಖಾಬ್ಧಿ ಮಗ್ನೆಯಂ ಮಾಡಿದಳೌ ॥ ೫೪ ॥

ಘೂ ॥ಪ್ರಿಯೆ! ನೀವಿಬ್ಬರು ಅತ್ಯಂತ ಮೈತ್ರಿಯಿಂದಿದ್ದರಷ್ಟೆ? ಹೀಗಾಗುವದಕ್ಕೆ ಕಾರಣವೇನು?

ದೇವ॥ ನಾವು ಜಲಕ್ರಿಡೆಯಾಡುತ್ತಿರುವಾಗ ಪಾರ್ವತೀ ಸಹಿತನಾದ ಭೂತೇಶನು ಆಕಾಶದಲ್ಲಿ ನಿಂತು ನಮ್ಮಗಳನ್ನು ನೋಡುತ್ತಿರುವನೆಂಬುದನ್ನು ಕೇಳಿ ಅತ್ಯವಸರದಿಂದ ವಸ್ತ್ರಂಗಳನ್ನು ಧರಿಸುತ್ತಿರುವಾಗ ನನ್ನ ವಸ್ತ್ರವನ್ನು ಶರ್ಮಿಷ್ಠೆ ಧರಿಸಲು, ತರವಲ್ಲವೆಂದು ಹೇಳಿದುದಕ್ಕೆ ನನ್ನನ್ನು ವಸ್ತ್ರವಿಹೀನಳನ್ನಾಗಮಾಡಿ ಬಂದು ಅಗಾಧವಾದ ಹಾಳು ಭಾವಿಯಲ್ಲಿ ತಳ್ಳಿ ತಾನು ಸಖಿಯರೊಡನೆ ಊರಿಗೆ ಹೊರಟು ಹೋದಳು!

ಘೂರ್ಣಿಕೆ॥ಆಹಾ! ಎಂತಹ ಕಷ್ಟಕ್ಕೆ ಗುರಿ ಮಾಡಿದಳು? ಆ ಮೇಲೆ?

ದೇವ ॥ ಮೃಗಯಾವಿಹಾರಕ್ಕಾಗಿ ಬಂದಿದ್ದ ಆವನೋ ಒಬ್ಬ ರಾಜಪುರುಷನಿಂದ ಆ ಕಷ್ಟವಂ ಕಳೆದು ಆತನಿಂದ ಕೊಡಲ್ಪಟ್ಟ ಈ ವಸ್ತ್ರವನ್ನು ಧರಿಸಿ ಹೀಗೆ ವ್ಯಸನಪಡುತ್ತಿರುವೆನು!

ವೃ॥ ಪುಟ್ಟಿದದಿಷ್ಟದಿಂ, ಕಚನನೇಹದೊಳಿರ್ದವಗಪ್ಪ ಕಷ್ಟದಿಂ ।
ಪಟ್ಟೆನನಂತ ದುರ್ವ್ಯಥೆಯನಾತನಿನೊಂದುವೆನೆಂದು ಸಾಖ್ಯಮಂ ॥
ಇಟ್ಟೆನವಂ ಮನೋವ್ಯಥೆಯೊಳಿಂತು ನಿಶಾಚರಿಯಾಪ್ತ ಸಖ್ಯದಿಂ ।
ಕೆಟ್ಟೆನಿದೇಕೆ ಸುಟ್ಟೊಡಲಿಳಾತಳದೊಳ್ ಛಡ! ಬಾಳ್ವೆನೆಂತುನಾಂ ।೫೫।

ಘೂ॥ ಪ್ರಿಯೆ! ಶಾಂತಚಿತ್ತೆಯಾಗು! ನಾವು ಪಟ್ಟಣಕ್ಕೆ ಹೋಗಿ ನಿಮ್ಮ ತಂದೆಗೆ ಹೇಳಿ ಆತನಿಂದ ಆ ನೀಚಳಿಗೆ ತಕ್ಕ ಶಿಕ್ಷೆಯನ್ನು ಮಾಡಿಸೋಣ! ಆ ಮಹನಿಯರು ಅಸಂಖ್ಯಾತಂಗಳಾದ ಉಪಕಾರಂಗಳನ್ನು ಈ ರಾಕ್ಷಸಳಿಗೆ ಮಾಡಿಯೂ ಮಾಡುತ್ತಲೂ ಇದ್ದರೂ ಇವರು ಕೆಡುಕನ್ನೇ ಮಾಡುತ್ತಿರುವರಲ್ಲಾ? ಇದು ನೀಚರ ಸ್ವಭಾವವು! ಹಾಗೆಯೇ ಸರಿ.

ಕಂ॥ ಪರರಿಂ ಹಿತಮಗಪ್ಪ ಪ್ರಕೃತಿ ।
ಗೆರಡಾಗಿತ್ತ ಪರವರ್ಗೆ ಖೇದವನೆಲ್ವರ್ ॥
ಉರಗಂ ಪಾಲಿತ್ತರ್ಗಂ ।
ಗರದಿಂ ಭಯ ದುಃಖಚಯವನೊಂದಿಪ ತೆರದಿಂ ॥ ೫೬ ॥

ಆಗಲಿ! ಪ್ರಿಯೆ! ಇನ್ನು ಪಟ್ಟಣಕ್ಕೆ ಹೋಗೋಣ! ಏಳು!

ದೇವ॥ ಸಖಿ! ಆ ದುಷ್ಟಳಿಂದ ಅವಮಾನವನ್ನು ಹೊಂದಿ ಮತ್ತು ಅವಳ ಪಟ್ಟಣಕ್ಕೆ ನಾನು ಬರುವುದೆಂತು? ನಾನು ಬರಲಾರೆನು! ನಾನು ಬದುಕಿರಬೇಕೆಂಬ ಇಚ್ಛೆ ನಿನಗಿದ್ದರೆ ನಮ್ಮ ತಂದೆಯವರನ್ನು ಇಲ್ಲಿಗೆ ಕರೆದುಕೊಂಡು ಬರುವಳಾಗು! ನಾನು ಊರಿಗೆ ನಿಜವಾಗಿ ಬರಲಾರೆನು!

ಘೂ॥ ಹಾಗಾದರೆ ಈ ವಸ್ತ್ರವನ್ನು ತೆಗೆದುಕೊಳ್ಳುವವಳಾಗು! ಶೀಘ್ರದಲ್ಲಿಯೇ ಪಟ್ಟಣಕ್ಕೆ ಹೋಗಿ ಬರುವೆನು.

ದೇವ॥ ಹಾಗೆ ಮಾಡು! ( ಘೂರ್ಣಿಕೆ ಹೊರಟು ಹೋದಳು ).

ಶುಕ್ರಾಚಾರ್ಯರು. ( ನೈಪಥ್ಯದಲ್ಲಿ ) ಮಗು! ಘೂರ್ಣಿಕೆ! ನಿನ್ನ ಸಖಿಯೆಲ್ಲಿರುವಳು?

ಘೂರ್ಣಿಕೆ॥ ( ನೈಪಥ್ಯದಲ್ಲಿ ) ಇದೊ ಇಲ್ಲಿಯೇ ಇರುವಳು.

ಶುಕ್ರಾಚಾರ್ಯ॥ ( ಪ್ರವೇಶಿಸಿ ಪ್ರಕಾಶಂ )

ಕಂ॥ ಬಾಕಾ ಮನ್ಮಾನಸಹಿತೆ ।
ಕಾರಿಣಿ ನೀರೇರುಹಾಭಮೃದುತರ ಪಾಣೀ ॥
ಸೈರಿಸೆ ನೀ ದು:ಖವತವ
ವಾರಿಜಸಮ ಮುಖವ ಕಾಣದೊಂದರೆಚಣಮುಂ ॥ ೫೭ ॥

ಮಗಳೇ! ಇಲ್ಲಿಬಾ! ಮುದ್ದುಮಾತನಾಡು! ಆ ದುಷ್ಟರಾಕ್ಷಸಿಯರಿಂದ ಆದ ಎಷ್ಟು ಬಾಧೆಯನ್ನು ಸಹಿಸಿದೆಯೇ? ಕಂದ! ಅಯ್ಯೋ! ಪಟ್ಟಣಕ್ಕೆ ಹೋಗಿ ಅವಳ ತಂದೆಯಿಂದ ತಕ್ಕ ಶಿಕ್ಷೆಯನ್ನು ಮಾಡಿಸೋಣ! ನಡೆ!

ದೇವ॥ ತಾತನೆ! ಆ ನೀಚಳಿಂದ ಆ ರೀತಿ ಕಷ್ಟವನ್ನನುಭವಿಸಿ ಮತ್ತೂ ನಾಚಿಕೆಯಿಲ್ಲದೆ ಅವಳಿರುವ ಸ್ಥಳಕ್ಕೆ ಹೇಗೆ ಬರಲಿ? ನನ್ನ ಪ್ರಾಣವೀಗಲೇ ಹೋದರೂ ನಾನು ಆ ಪಟ್ಟಣಕ್ಕೆ ಬರಲಾರೆನು!

ಶುಕ್ರಾ॥ ಮಗಳೆ! ಆ ನೀಚಳಿಗೆ ತಕ್ಕ ಶಿಕ್ಷೆಯನ್ನು ಅವಳ ತಂದೆಯಿಂದಲೇ ಮಾಡಿಸೋಣ! ಅಲ್ಲಿಗೆ ಹೋಗದೆ ಹೋದ ಮಾತ್ರಕ್ಕೇ ಅವಳಿಗೇನು ಶಿಕ್ಷೆಯನ್ನು ಮಾಡಿದಂತಾಯಿತು? ನಿನಗೆ ಹೇಗೆ ಸಂತೋಷವೋ ಹಾಗೆ ನಡೆಯಿಸುವೆನು, ಪಟ್ಟಣಕ್ಕೆ ನಡೆ! ಹೋಗೋಣ!

ದೇವ॥ ನಾನು ನಿಜವಾಗಿ, ಆ ದುಷ್ಟರ ಪಟ್ಟಣದೊಳಿರುವುದಕ್ಕೆ ಬರುವುದಿಲ್ಲವು! ನಿನಗೆ ಇಷ್ಟವಿದ್ದರೆ ನೀನೇ ಇರು!

ಶುಕ್ರಾ॥ § ನಿನ್ನನ್ನೇ ನನ್ನ ಪ್ರಾಣವೆಂದು ನಂಬಿಕೊಂಡಿರುವೆನು! ನಿನಗೆ ಹೇಗೆ ಇಷ್ಟವೋ ಹಾಗೆಯೇ ಇರು! ನೀನಿರುವೆಡೆಯಲ್ಲಿ ನನ್ನ ಇಷ್ಟದಂತೆ ನಾನೂ ಇರುವೆನು! ( ಎಂದು ಹೊರಟು ಹೋಗುತ್ತಿರುವರು. )

( ವೃಷಪರ್ವಂ ಮಂತ್ರಿಯೊಡನೆ ಬರುವಿಕೆ )

ವೃಷಪರ್ವಂ॥ ( ನೈಪಥ್ಯದಲ್ಲಿ ) ಮಂತ್ರೀಂದ್ರನೆ! ಪುತ್ರೀಯುಕ್ತರಾದ ನಮ್ಮ ಕುಲಗುರುಗಳು ಎಲ್ಲಿ ಹೋಗುತ್ತಿರುವರು?

ಮಂತ್ರಿ॥ (ನೈಪಥ್ಯದಲ್ಲಿ) ಮಹಾರಾಜನೆ! ಇಲ್ಲಿಯೇ ದಯಮಾಡುತ್ತಿರುವರು!

ವೃಷ॥ ( ಪ್ರವೇಶಿಸಿ, ಶುಕ್ರಾಚಾರ್ಯರೊಡನೆ ) ಮಹಾತ್ಮರಿಗೆ ವಂದನೆ!

ಶುಕ್ರಾ॥ ( ಕೋಪದೊಡನೆ ಮಾತನಾಡದೆ ಸುಮ್ಮನಿರುವನು ).

ವೃಷ॥ *ಕಂ॥ ಕೋಪವಿದೇತಕೆ ಶಿಷ್ಯನೊ ।
ಳೀಪರಿಯಿಂ ಮೌನಿಚಂದ್ರಕರುಣಾ ಸಾಂದ್ರಾ ॥

---

§ ರಾಗ ನಾದ ನಾಮಕ್ರಿಯೆ, ಅಟತಾಳ ( ಸಖಿಯೇ ತಾಪವಸೈಸಲಾರೆ ಸಖಿಯೆ ) ಸುತೆಯೇ ಬಿಟ್ಟಿರಲಾರೆನಾಂ । ಸುತೆಯೇ ॥ ಪ॥ ನಿನ್ನನ್ನು ಬಿಟ್ಟೆನಾ । ನಿನ್ನೆಂತು ಜೀವಿಪೆಂ । ಇನ್ನುಳಿದು:ಖವ । ಸನ್ನುತ ಸದ್ಗುಣಿ ॥೧॥ ತವವದನವನೊ । ಲವಿನಿಂದೆ ನೋಡುತೆ ॥ ಭವದು:ಖದೆ ತೋಷವ ನಾನುತಿರ್ದೆನೆ ॥ ೨ ॥ ಬರ್ಪನದೆಲ್ಲಿನೀ। ನಿರ್ಪಿಷ್ಟಮಲ್ಲಿಗಾಂ॥ ಸರ್ಪಪ್ರವೇಶಿಯೆ। ಓರ್ಪಿರಿಸೆನ್ನೊಳೆ॥೩॥

* ರಾಗ ಕನಡ ರೂಪಕತಾಳ ಮನಸು ದೀರೆನಾ। ಸಾಮಿ।
ಕರುಣಮಿರಿಸೈ। ದೇವ॥ ಪ ॥ ಪರಮಪಾವನಾರ್ಯತಿಲಕ । ಸುರಮೌಳಿವಂದಿತನೆ ॥

ಶಾಪವನೆಸಗುತ್ತೆನಗಂ ।
ಪೋಪರೆ ಪಟ್ಟಣಮನುಳಿದು ತಮಗುಚಿತಮಿದೇಂ ॥ ೫೮ ॥

ವಿಧೇಯನಾದ ನನ್ನಿಂದ ಏನಪರಾಧ ನಡೆದಿದ್ದರೂ ಕ್ಷಮಿಸಿ, ಬುದ್ಧಿಯನ್ನು ಕಲಿಸಬೇಕಲ್ಲದೆ ಪಟ್ಟಣವನ್ನೇ ಬಿಟ್ಟು ಹೊರಟು ಹೋಗುವದು ತರವಲ್ಲವು! ದಯೆಯಿಂದ ಆ ಕಾರಣವನ್ನು ಅಪ್ಪಣೆ ಕೊಡಿಸಬೇಕಾಗಿ ಪ್ರಾರ್ಥಿಸುವೆನು?

ಶುಕ್ರಾ॥ I ವೃ॥ ನಿನ್ನಯ ಪುತ್ರಿ, ದುಷ್ಟಮತಿ, ಯೆನ್ನತನೂಜೆಗೆ, ಗೆಯ್ದ, ಹೇಯದಾ । ಬನ್ನವ ಕೇಳ್ದುದಿಲ್ಲವೆ ದುರಾತ್ಮ!
ವೃ॥ ಮಹಾತ್ಮನೇ! ಕೇಳ್ದುದಿಲ್ಲದಂ ॥
ಶುಕ್ರಾ॥ ಇನ್ನಿರೆ ನಾಂ ತವಾಶ್ರಯದೆ,
ವೃಷ॥ ಪೋಪುದದೆಲ್ಲಿಗೆ?
ಶುಕ್ರಾ॥ ನೀಚ! ಎಲ್ಲಸಂ । ಪನ್ನತೆಯುಂಟೊ ಪೋಪೆನೆಲೆ!
ವೃ॥ ಬಂದಪೆನಲ್ಲಿಗೆ ತಮ್ಮ ಸಂಗದೊಳ್ ॥ ೫೯ ॥

---

॥ ಅ ॥ ನಿನ್ನ ಪಾದಗಳ ನಂಬಿ । ಸನ್ನುತನೆ ಸುಖದೊಳಿರ್ದೆಂ ॥ ಮನ್ನಣೆಯಿಂ ಪಾಲಿಸೆನ್ನಂ । ಗನ್ನವೈಮು ಚರಿತನೆ ॥ ೧ ॥ ಕೋಪವಿದೇತಕ್ಕೆ ನಿನಗೆ। ತಾಪಸೇಂದ್ರ ಭಕ್ತನೊಳಗೆ ॥ ಈ ಪರಿಯನುಳಿದುದಯದೆ। ಕಾಪಾಡು ಭರದಿಂದೆ ॥ ೨ ॥ ನಿನ್ನನುಳಿದ ಧರೆಯಿಂದೇತ। ಕಿನ್ನು ನಿಮ್ಮೊಡನೆ ಬರುವೆಂ। ಖಿನ್ನತೆಯನಳಿಸುತೀಗ। ಮೆನ್ನ ನಗರದಿರುತೆ ನೀಂ ॥ ೩ ॥

I ರಾಗ ಹಿಂದುಸ್ತಾನಿ ತೋಡಿ, ಆದಿತಾಳ( ಸಖಿಡೆಂದುನ್ನಾಡೆ, ಸಖಿಜೂಪವೇ ॥ ) ನೀಚ ಛೀ ಛೀ ಮರೆ।ಮಾಚುವೆಯೇನೋ ॥ ಪ ॥ ಜಡಚಿತ್ತ ನಿನ್ನಯ। ನಡಲಿಚಳ್ತನ್ನಯ ಒಡನಾಡಿಗಕ್ಕಜ। ಪಡಲಿಟ್ಟುದಂ ॥ ೧ ॥ ನಿನ್ನಯ ಪಟ್ಟಣ। ದಿನ್ನು ನಾನಿರೆನೊ ॥ ಮನ್ನಣೆಯದಿಲ್ಲಂ। ನಿನ್ನ ಸಂಗದೆ॥ ೨ ॥ ಎಲ್ಲಿ ಸೌಖ್ಯವುಂಟದೆಲ್ಲಿಮೋದಮುಂಟ ॥ ದೆಲ್ಲಿ ಗೌರವಿಪರೊ - ಅಲ್ಲಿಗೈದುವೆಂ ॥ ೩ ॥

ರಾಗ ( ಮೇಲಿನ ಮಟ್ಟನಂತೆ ) ಕಾಣೆನಾರ್ಯಮಣಿ। ಮಾಣವಕ ನಾಂ ॥ ಪ ॥ ಎನ್ನ ಪುತ್ರಿಯದಾ। ರನ್ನದೇಂತಾಂಗೈದ ॥ ಳೆನ್ನುವುದಪೇಳ। ದನ್ನುದಯದೆ ॥೧॥ ಎಲ್ಲಿಗೆ ಪೋಪುದೋ। ಎಲ್ಲಿ ತಾಮಿರ್ಪದೋ ॥ ಎಲ್ಲಿರಲ್ಕಷ್ಟವ। ದೆಲ್ಲಂ ಪೇಳುದು ॥ ೨ ॥ ತಮ್ಮನೇನಂಬಿಹೆ । ನೊಮ್ಮನದಿಂದಮಾಂ ॥ ಕೆಮ್ಮನೆ ಬರುವೆಂ। ಹಮ್ಮುಗೆಯು ಪೋಲ್ ॥ ೩ ॥

ಶುಕ್ರಾ॥ ಛೀ! ದುರಾತ್ಮ! ನಾಚಿಕೆಯಿಲ್ಲದೆ ಮತ್ತೂ ನನ್ನೊಡನೆ ಮಾತನಾಡುವುದಕ್ಕೆ ಬಂದೆಯಾ?

ಕಂ॥ ಖಳಜನಕೆನಿತುಪಕೃತಿಗಳ ।
ನಳವಿಂದನುಗೆಯ್ದೊಡೇಂ ಸ್ವಬುದ್ಧಿಯನುಳಿಯರ್ ॥
ಬೆಳೆಯಿಸೆ ಪಾಲಿಂ ಸಕ್ಕರೆ ।
ಯೊಳೆಬೇವದು ತನ್ನ ಕಹಿಯನೇನುಳಿದಪುದೇ? ॥ ೬೦ ॥

ನಿಜವಾಗಿ ನಾನು ನಿನ್ನ ಮುಖವನ್ನು ನೋಡಲಾರೆನು ಹೊರಡುವೆನು. (ಎಂದು ಹೊರಟನು. ವೃಷಪರ್ವನು ಅಡ್ಡವಾಗಿ ಬಂದು ಕೈಮುಗಿದು)

ವೃ॥ ಕಂ॥ ಪಡೆದಾಮಾಳೆಯೆ ಸೂನುಗೆ ।
ಕೊಡೆಬಿಸವುಂ ಪೊರೆವರಾರೊ ಮಾನ್ಯನೆನೀನೇ ॥
ಬಿಡಲೆನ್ನಂ ದೀನಂತಾಂ ।
ಪೊಡವಿಯೊಳಿನ್ನಾರನೆಣಿಪೆನೋವರೆನುತ್ತಂ ॥ ೬೧ ॥

ಮಹಾನುಭಾವನೆ! ಕಾಪಾಡು! ಕಾಪಾಡು! ನಿಶ್ಚಯವಾಗಿಯೂ ನೀನಿಲ್ಲದಿದ್ದರೆ ಈ ರಾಜ್ಯಭಾರಕ್ಕೆ ನೀನಿರುವೆಡೆಯಲ್ಲಿಯೇ ನಿನ್ನ ಶಿಷ್ಯನಾಗಿರುವೆನು. ದಯೆಗೊಳ್ಳು! (ಎಂದು ಪಾದದ ಮೇಲೆ ಬೀಳುವನು.)

ಶುಕ್ರಾ॥ ಏನೈ ರಾಕ್ಷಸೇಂದ್ರನೆ! ನಿಮ್ಮಗಳ ಕೃತ್ಯವು ಸಹಿಸಕೂಡದುದಾಗಿದೆ! ನಿನ್ನ ವಿನಯವೋ ಕಲ್ಲನ್ನು ಕೂಡಾ ಕರಗಿಸತಕ್ಕುದಾಗಿರುವುದು ಏನುಮಾಡುವುದು? ನನ್ನ ಯತ್ನವಿಲ್ಲವು. ನನ್ನ ಮಗಳಾದ ಈ ದೇವಯಾನೆಯು ಆಜ್ಞಾನುವರ್ತಿಯಾಗಿರುವೆನು. ಈಕೆಯನ್ನು ಒಪ್ಪಿಸಿದರೆ ನಿನ್ನಿಷ್ಟದಂತೆ ಇರುವೆನು.

ವೃಷ॥ ಮಹಾತ್ಮರ ಆಜ್ಞೆಯನ್ನು ಶಿರಸಾವಹಿಸುವೆನು. (ಎಂದು ದೇವಯಾನೆಯ ಕಡೆ ಕೈಮುಗಿದು) * ಎಲೌ ಮಾತೆಯೇ, ನೀನು ಗುರುಪುತ್ರಿಯಾದುದರಿಂದ ನಾನು ರಾಜನಾದರೂ ವಂದಿಸುವೆನು ಕೃಪೆಯಿಡು. ನನ್ನಿಂದ ಆವ ದುಷ್ಕೃತ್ಯವಾಚರಿಸಲ್ಪಟ್ಟಿದ್ದರೂ ಹೇಳು ಸರಿಪಡಿಸಿಕೊಳ್ಳುವೆನು. ಇನ್ನಾ

* ರಾಗ ಮುಖಾರಿ ಆದಿತಾಳ (ನೇನೇಮುಂದು ಮುದ್ದು ಬಾಲಾಮಣಿ । ಚಾಲಿ) ಪೇಳೌ ದೇವಿ ಗುರುತನೂಭವೆ । ಬೇಗ ॥ ಪ ॥ ಶೀಲಸಚ್ಚಾರಿತ್ರರ, ತನೂಭವೆ ॥ ॥ ಅ ॥ ವಂದಿಪೆ ನಾನರ । ವಿಂದ ನಿಭಾಂಘ್ರಿಗೆ ॥ ದಂದುಗಮಾಯ್ತಾ । ರಿಂದ ಮತಿವೇಲಂ ॥ ೧ ॥ ಆರಾದೊಡಂತಾಂ । ಕ್ರೂರದೆ ಶೀಕ್ಷಿಪೆಂ ॥ ಆರವರೋದಯ । ದೋರಮಣೀಮಣಿ ॥ ೨ ॥ ನಿನ್ನಾಕಾಂಕ್ಷೆಯ । ದಿನ್ನೇನಿಹುದೋ ॥ ಸನ್ನುತೆ ಪೇಳ್ದೊಡ । ದನ್ನು ತಂದೀವೆನೌ ॥ ೩ ॥

ರದೆಸೆಯಿಂದ ನಡೆದಿದ್ದರೂ ಆಜ್ಞಾಪಿಸು. ಅದರಂತೆ ಶಿಕ್ಷೆಯನ್ನು ಮಾಡುವೆನು. ನಿನಗೆ ಇನ್ನೇನು ಅಪೇಕ್ಷೆಯೋ ತಿಳುಹಿಸು. ಅದು ಹರಿಹರಬ್ರಹ್ಮರುಗಳಲ್ಲಿದ್ದರೂ ತೆಗೆದುಕೊಂಡುಬಂದು ಕೊಡುವೆನು. ದೇವಿ ಪ್ರಸನ್ನಳಾಗು.

ದೇವ॥ ಕಂ॥ ತಾನೇ ಕಣ್ಣಿಂಚುಚ್ಚುತೆ ।
ನೀನೇತಕ್ಕಳುವೆಯೆಂದು ಕೇಳ್ವವೊಲಾಯ್ತಾ ॥
ನೀನಾಡುವ ವಿನಯದ ನುಡಿ ।
ಯಾನೇಂ ಪೇಳುವುದೊ ನಿನ್ನ ಕೃತ್ರಿಮಕೃತಿಯಂ ॥ ೬೨ ॥

ವೃಷ॥ ಮಾತೆಯೆ ನಾನು ಕೃತ್ರಿಮಿಯೆಂದೆಣಿಸಬೇಡ; ನಿಜವಾಗಿ ಅವ ವಿಷಯವನ್ನೂ ನಾನರಿತವನಲ್ಲವು; ಏನು ಸಂಗತಿಯೋ ದಯೆಯಿಟ್ಟು ತಿಳುಹಿಸುವಳಾಗು. ನಿನ್ನಲ್ಲಿ ತಪ್ಪನ್ನು ಮಾಡಿದವರಾದರೂ ನಿನ್ನಿಷ್ಟದಂತೆ ಅವರಿಗೆ ಶಿಕ್ಷೆಯನ್ನು ಮಾಡುವೆನು.

ದೇವ॥ ನಿನ್ನ ಮಗಳಾದ ಆ ನೀಚ ಶರ್ಮಿಷ್ಠೆಯು ನನ್ನನ್ನು ನಗ್ನಳನ್ನಾಗಮಾಡಿ ನಿರ್ಜಲವಾದ ಅಗಾಧವಾದ ಹಾಳುಬಾವಿಯಲ್ಲಿ ತಳ್ಳಬಹುದೇ?

ವೃಷ॥ ಇದು ಅತ್ಯಂತ ದುಷ್ಕೃತ್ಯವು! ಹೀಗೆ ಮಾಡುವುದಕ್ಕೆ ಕಾರಣವೇನು?

ದೇವ॥ ನನ್ನ ವಸ್ತ್ರವನ್ನು ಅವಳು ಧರಿಸಿದುದಕ್ಕೆ ಬೇಡವೆಂದು ನಾನು ಹೇಳಿದುದೇ:-

ವೃಷ॥ ಹಾಗೆಯೇ?

ವೃ॥ ತನುಜಂ ಭಾರ್ಯೆ ತನೂಜೆಮಿತ್ರ ಗುರುಗಳ್ ಸದ್ಬಂಧುಗಳ್ ಸೇವಕರ್।
ಧನವಂತರ್ ಘನಭಾವರಾರ್ಯಜನಮುಂ ಸೇನಾನಿಗಳ್ ಮಂತ್ರಿಗಳ್ ॥
ಮನುಜೇಂದ್ರರ್ಕಳು ಮಾದೊಡಂ ದುರಿತಕೃತ್ಯಂಗೆಯ್ಯಲಾಜ್ಞಾರ್ಹರಂ।
ತೆನಿಜಂ ಮತ್ಸುತೆಯಾದೊಡಂ ಬಿಡದೆ ನೀಂ ಪೇಳ್ದಂತೆಯಾಂಶಿಕ್ಷಿಪೆಂ।೬೩।

ದೇವಿ! ಹೇಳು! ಆ ನೀಚಳನ್ನು ಅವ ವಿಧವಾದ ಶಿಕ್ಷೆಗೆ ಗುರಿಮಾಡತಕ್ಕುದು?

ದೇವ॥ ( ಆತ್ಮಗತಂ ) ಆ ನೀಚಳಿಗೆ ಮರಣದಂಡನೆಯೇ ತಕ್ಕುದಾಗಿ ಅದು ನನಗೆ ಸಂತೋಷದಾಯಕವಾದರೂ, ತಮ್ಮ ಸಂತೋಷಕ್ಕಾಗಿ ಪರರನ್ನು ಹಿಂಸಿಸುವುದು ಧರ್ಮವಲ್ಲವು. ಅವಳು ಮಾಡಿದ ದುಷ್ಕೃತಿಗೆ ತಕ್ಕ ಫಲವನ್ನು ಪರದಲ್ಲಿ ಅವಳೇ ಪಡೆಯಲಿ. ಇಹದಲ್ಲಿ ಈ ರೀತಿಯಾಗಿ ಶಿಕ್ಷೆಯನ್ನು ಮಾಡಿ ನನ್ನ ಸಂಕಟವನ್ನು ಹೋಗೊಳಿಸಿಕೊಳ್ಳುವೆನು. ( ಪ್ರಕಾಶಂ ಎಲೈ ರಾಕ್ಷಸಶ್ರೇಷ್ಠನೇ ಆ ದುಷ್ಟಳಿಗೆ ಇನ್ನಾವ ಶಿಕ್ಷೆಯನ್ನು ಮಾಡುವುದಕ್ಕೂ ನನಗೆ ಮನವೊಡಂಬಡುವುದಿಲ್ಲವು. ಏಕೆಂದರೆ? ಆ ಪಾಪಿನಿ ಬಾಲ್ಯದಿಂದಲೂ ನನ್ನ ಸಹವಾಸದಲ್ಲಿದ್ದವಳು. ಅವಳು ನೀಚ ಕೃತ್ಯವನು

ಮಾಡಿದವಳಾದರೂ ಅವಳಿಗೆ ಪ್ರಾಣಹಿಂಸೆಯನ್ನು ಮಾಡಲಿಕ್ಕೆ ನನ್ನ ಮನಸ್ಸೊಪ್ಪುವುದಿಲ್ಲವು.

ವೃಷ॥ ಕಂ॥ ತನ್ನಯ ಸುತರಿಂ ಮಾತೆಗೆ ।
ಬನ್ನಂಗಳ್ ಪೊರ್ದಿದೊಡೆಯುಮವರಂ ಪೊರೆವಳ್ ॥
ಸನ್ನುತಚರಿತರ್ ಕಿರಿಯರ ।
ಮನ್ನಿಸದಪರಾಧಮೆಣಿಸರೇ ಭೂತಳದೊಳ್ ॥ ೬೪ ॥

ಈ ಗುಣವು ಸರ್ವ ನೀತಿಜ್ಞರ ಸುತೆಯಾದ ನಿನಗೆ ತಕ್ಕುದು. ತಾಯೆ ಆಜ್ಞಾಪಿಸು. ಇನ್ನಾವರೀತಿಯಾಗಿ ಶಿಕ್ಷಿಸಲಿ?

ದೇವ॥ ರಾಕ್ಷಸಮಣಿ! ನೀನು ರಾಜನೀತಿಯಂತೆ ವರ್ತಿಸುವನಾದರೆ ಆ ನೀಚಳನ್ನು ಒಂದು ಸಾವಿರ ದಾಸಿಯರೊಡನೆ ನನ್ನ ದಾಸಿಯಾಗಿರುವಂತೆ ಮಾಡುವವನಾಗು.

ವೃಷ॥ ತಾಯೆ ನಿಮ್ಮ ಚರಣಕಮಲದ ಸೇವೆಯಿಂದಲೇ ನಮ್ಮ ವಂಶವು ಪವಿತ್ರವಾಗುವುದು. ನಾನು ಕೂಡಾ ನಿನ್ನ ಆಜ್ಞಾನುವರ್ತಿಯಾಗಿ ಇರುವೆನು. ಪುರಕ್ಕೆ ಹೊರಡಬಹುದು.

ದೇವ॥ ಕಂ॥ ನೃಪತಿಗಳ ರಕ್ಕಸರ್ಕಳ ।
ಕೃಪಣರ ಮಾತುಗಳ ನಂಬಲಾಗದು ಜಗದೊಳ್ ॥
ಉಪಟಳಮಿವರೊಳ್ಸಟೆ ತಾ ।
ನುಪಚಾರಮೊ ನೈಜಕಾರ್ಯಪರತೆಯೊ ಕೃಪೆಯೋ ॥ ೬೫ ॥

ಆದುದರಿಂದ ನಿನ್ನನ್ನು ನಂಬುವುದು ಹೇಗೆ?

ವೃಷ॥ ದೇವಿ! ನಿನ್ನ ಪಾದವನ್ನು ಮುಟ್ಟಿ ಹೇಳುವೆನು! ನಿಜವಾಗಿಯೂ ನಿನ್ನಿಷ್ಟದಂತೆ ಸಹಸ್ರದಾಸೀಜನಸಹಿತವಾಗಿ ನನ್ನ ಪುತ್ರಿಯನ್ನು ನಿನ್ನ ಸೇವೆಗಾಗಿ ಕೊಟ್ಟಿರುವೆನು!

ಶುಕ್ರಾ॥ ಪುತ್ರಿಕಾಮಣಿ! ನಮಗೆ ಅತ್ಯಂತ ಪ್ರಿಯಪಾತ್ರನಾದ, ನೀತಿಜ್ಞನಾದ ಈ ರಾಕ್ಷಸೇಂದ್ರನಲ್ಲಿ ಅನುಮಾನವನ್ನು ಬಿಟ್ಟು ದಯಾವತಿಯಾಗು!

ದೇವ॥ ಜನಕನ ಆಜ್ಞಾನುವರ್ತಿನಿಯಾಗಿರುವೆನು.

ಶುಕ್ರಾ॥ ಇನ್ನು ಹೊರಡೋಣ!

ದೇವ॥ ಅಪ್ಪಣೆ! ( ಎಂದೆಲ್ಲರೂ ಹೊರಟರು. )

ತೃತೀಯಾಂಕಂ ಮುಗಿದುದು.

ಶ್ರೀರಾಮಂ.

---

# ಚತುರ್ಥಾಂಕಂ.



( ದೇವಯಾನಿ ವನವಿಹಾರಕ್ಕೆ ಸಖಿಯರೊಡನೆ ಬರುವಿಕೆ. )

ಸಖಿ ॥ * ವೃ ॥ ತಣ್ಣೆಳಲಿಲ್ಲಿ ನಿರ್ಮಲಜಳಂ ಸಲೆ ತಂಗೊಳಮಿಲ್ಲಿ ಮಾವಿನಾ।
ಪಣ್ಣಿಹುದಿಲ್ಲಿ ಚಂದ್ರಮಶಿಲಾಕೃತ ವೇದಿಕೆಯಿಲ್ಲಿ ಮಾರನಾ।
ಕಣ್ಣಿಹುದಿಲ್ಲಿ ಮೋದಮಿಹುದಿಲ್ಲಿ ಮನೋಹರಮೆಂಬ ರೀತಿ
ಯಂ। ಬಣ್ಣಿಪವೊಲ್ಸಸೌರಭ ಕಲಸ್ವರ ಮೈದುಗುಮಾಹ
ತಂಬೆಲರ್ ॥ ೬೬ ॥

ದೇವ ॥ ಈ ಗಾಳಿ ಬಹಳೆ ಹಿತಕರವಾಗಿರುವುದು.

ಸಖಿ ॥ ಈ ಶೀತಲವಾದ ಶಿಲಾಪೀಠದಲ್ಲಿ ಸ್ವಲ್ಪ ವಿಶ್ರಮಿಸಬಹುದು.

ದೇವ ॥ ಹಾಗೆಯೇ ಆಗಲಿ.

ಸಖಿ † ವೃ ॥ ನಿರುಕಿಸುಮತ್ಸಖೀ ವನದ[illegible]ವ ಪಲ್ಲವದಿಂದ ಮೊಪ್ಪುವಾ।
ಸುರಭಿಯುತಾಮ್ರಮಿಂತು, ಕುಸುಮಾವೃತ ರಾಜಿತ ಗುಲ್ಮಮಂಟಪಂ ॥
ಪರಭೃತದಿಂಚರಂ ಮುದಮನೊಂದಿಸುಗುಂ ಲತೆಗಳ್ ಸುಮಂಗಳಿಂ।
ದುರೆಮೆರೆಗುಂ ಸ್ಮರೋತ್ಸವವೊ ಮಾಧವನೇಳ್ಗೆಯೊ ಕಾಣೆನೆಂಬಿನಂ ॥೬೭॥

ದೇವ॥ ಅಹುದು ಪ್ರಿಯೆ, ಬಹಳ ಆನಂದಕರವಾಗಿರುವುದು. ಅಲ್ಲಿ ನೋಡು. ಆ

---

* ರಾಗ ಹಿಂದುಸ್ಥಾನಿ ಕಾಪಿ ( ಪಡೆದಿಹೆವರಮಂ । ಪೊಡವಿಯೊಳಾಂ ॥ )
ಅಹ ತಂಗಾಳಿ। ಮಹಿಳಾಳಿ ॥ ಗಿಹ ತಾಪದೆ ಸ। ಲಹುವುದು ನೋಡೆಲೆ ॥ ಪ ॥
ತಣ್ಣೆಳಲಿಲ್ಲಿದೆ। ತಣ್ಣೀರಿಲ್ಲಿದೆ ॥ ಪಣ್ಣಿಹುದೆನುತಂ। ಬಣ್ಣಿಪವೊಲ್ ಜಲ್ ॥ ೧ ॥
ಹಿಮತರಶಿಲೆಯಿದೊ। ಸುಮವಿದೊವಿ ॥ ಸಮುದಾಯದ ಶ। ಬ್ದಮಿದೆಂಬೊಲ್
ಬಲ್ ॥ ೨ ॥

† ರಾಗ ಶಂಕರಾಭರಣ ಆದಿತಾಳ (ಪಾಹಿಮಾಂ ಪರೇಶನೆ ಸತತಂ ಮಹೇಂದ್ರನುತನೇ)
ವಾರಿಜಾಕ್ಷಿ ಚಂದಮೀಕ್ಷಿಸಿದಂ। ನಾರೀಮಣಿಯೆ ॥ ಪ ॥ ಕಂಪಿನೆಸೆವಲರ್ಜೊಂಪಿ
ನಿಂದಮೆ। ಪೆಂಪುವಡೆದೀ। ಗುಂಪಿನಗಿದ। ಸೊಂಪನೀಕ್ಷಿಸೆಲೆ ಮೋದದಿಂದಲೀ॥
ಕಂಪುವಳಂ-ಪೊಂಪುಳಿಯು। ನಾಂಪಪರಿಯಿಂ ಪಾರಿಪಂ ॥ ೧ ॥ ಕೀರ ಪಿತಂಗಳ।
ಸಾರನಿನದಂಗ। ಳೋರಣದೆ ಮನ। ಕೇರಿಸಲ್ ಸುಖಂ। ಮಾರನಾಟಕಾಹ್ವಾನ
ಗೆಯ್ಯುವ ॥ ನೀರರಸುಸ್ವರದನು। ಸಾರಮೆನೆ ತೋರುವುದೇ ॥ ೨ ॥

ಹರಿಣಿ ಹರಿಣನನ್ನು ಅರಸುತ್ತ ಅದರ ಬರುವಿಕೆಯನ್ನೇ ನಿರುಕಿಸುತ್ತ ಅನೇಕ ಕಾರಣಗಳಿಂದ ತನ್ನ ಮನದಲ್ಲಿರುವ ಅಭಿಲಾಷೆಯನ್ನು ವ್ಯಕ್ತಗೊಳಿಸುವುದು!

ಸಖಿ॥ ಪ್ರಿಯೆ! ಈಗ ವಸಂತಕಾಲವಲ್ಲವೆ? (ಎನ್ನುವಷ್ಟರಲ್ಲಿ)

ದೇವ॥ (ಅಂಗಚಲನವನ್ನು ಸೂಚಿಸಿ) ಪ್ರಿಯೆ! ಇದೇನು ನನ್ನ ಎಡದ ಕಣ್ಣು ಅದಿರುವುದು?

ಸಖಿ॥ ಇದು ಶುಭಶಕುನವು! ಶೀಘ್ರದಲ್ಲಿಯೇ ಮಂಗಳಮಂ ಕುಡುವುದು!

ದೇವ॥ ಪ್ರಿಯೆ! ನೀನು ಶಕುನಶಾಸ್ತ್ರವಿಶಾರದೆಯೋ?

ಸಖಿ॥ ದೇವಿ! ಸರ್ವಜ್ಞರ ಪುತ್ರಿಯಾದ ನಿನ್ನ ಶಿಷ್ಯೆಯಲ್ಲವೆ ನಾನು? (ಮುಂದೆ ನೋಡಿ) ಪ್ರಿಯೆ! ಅಲ್ಲಿ ಆರೋ ಮನ್ಮಥನಂತಿರುವ ಒಬ್ಬ ಮನುಜೇಂದ್ರನು ಬರುತ್ತಿರುವಂತಿದೆ.

ದೇವ॥ ಎಲ್ಲಿ?

ಸಖಿ॥ ಇದೊ ಇತ್ತಕಡೆ ನೋಡು.

ದೇವ॥ ಅಹುದು. ಆ ಆರ್ಯನನ್ನು ತಕ್ಕರೀತಿಯಿಂದ ಉಪಚರಿಸುವಳಾಗು. ನಾನೂ ಸಹಾಯಿಕೆಯಾಗಿರುವೆ ಪ್ರಿ

ಸಖಿ॥ ದೇವಿ! ಆ ಆರ್ಯನನ್ನು ನೋಡಿ ಆಲೋಚಿಸಿದರೆ ಆ ಆರ್ಯನಿಗೆ ಸಹಾಯಿಕೆಯಾಗಿರುವುದಕ್ಕೆ ನೀನು ತಕ್ಕವಳೇ ಸರಿ!

ದೇವ॥ ಪ್ರಿಯೆ, ಏನು? ಹೀಗೆ ಹೇಳುವೆ? ಅಭ್ಯಾಗತರನ್ನು ತಕ್ಕ ಉಪಚಾರದಿಂದ ಆದರಿಸು.

ಸಖಿ॥ ದೇವಿ! ಕ್ಷಮಿಸು. ನಿನ್ನ ಆಜ್ಞಾನುವರ್ತಿಯಾಗಿರುವೆನು.

ದೇವ॥ ಪ್ರಿಯೆ! ಈತನ ಆಕೃತಿಯನ್ನು ನೋಡಿದರೆ, ನನ್ನನ್ನು ಹಾಳುಭಾವಿಯಿಂದ ಈಚೆಗೆ ತೆಗೆದು ಮಾನವನ್ನು ಕಾಪಾಡಿ ಸುಖವನ್ನುಂಟು ಮಾಡಿದ ಮಹಾತ್ಮನಾಗಿರುವಂತೆ ತೋರುವುದು!

ಸಖಿ॥ ಹಾಗಾದರೆ ನಿನ್ನ ಮನೋಭಿಪ್ರಾಯಕ್ಕೆ ತಕ್ಕಂತೆ ನಾನೂ ಹೇಳಿದಂತಾಯಿತು!

ದೇವ॥ ಅದಕ್ಕೇ ನೀನು ಚತುರಿಕೆ! ಆತನನ್ನು ಉಪಚರಿಸುವುದಕ್ಕಾಗಿ ತಕ್ಕ ವಸ್ತುಗಳನ್ನಳವಡಿಸುವಳಾಗು!

ಸಖಿ॥ ಅಪ್ಪಣೆ! (ಎಂದು ಮೇಲಕ್ಕೆದ್ದು ಪ್ರವೇಶಿಸಿದ ರಾಜನೋಡನೆ) ಮಹಾತ್ಮನೆ! ಈ ಪೀಠವನ್ನಲಂಕರಿಸುವವನಾಗು. ಮಹಾರಾಜನಂತೆ ಇರುವ ನೀನು ಪರಿವಾರವಿಲ್ಲದೆ ಒಬ್ಬನಾಗಿ ಬಂದುದೇನು? ಅತಿಶ್ರಮವನ್ನು ಹೊಂದಿರುವ ನೀನು ನಮ್ಮಗಳಿಂದ ಅರ್ಪಿಸಲ್ಪಡುವ ಈ ಸ್ವಲ್ಪವಾಗಿರುವ ವಸ್ತುಗಳನ್ನು ಸ್ವೀಕರಿಸಿ ಸಮಾಧಾನವಂತನಾಗಬೇಕಾಗಿ ಪ್ರಾರ್ಥಿಸುತ್ತೇನೆ.

ಯಯಾತಿ॥ ಸಂತೋಷಿತನಾದೆನು! ಮಂಗಳಾಂಗಿಯರೆ! ನಿಮ್ಮ ನಿವಾಸಸ್ಥಾನವಾವುದು? ನೀವಾರಮಕ್ಕಳು? ಇಲ್ಲಿರುವುದೇತಕ್ಕೆ?

ಸಖಿ॥ ಕಂ ॥ ವರಶುಕ್ರಾಚಾರ್ಯರ ಸುತೆ ।
ಯರವಿಂದನಿಭಾಸ್ಯೆಯೊಕೆಯೆಮ್ಮನಿವಾಸಂ ॥
ಸುರರಿಪುವೃಷಪರ್ವನಪುರಿ ।
ಸುರಭಿಯೊಳಾವಿಲ್ಲಿ ಬರ್ಪೆವಾಧಿಯನಳಿಪಲ್ ॥ ೬೮ ॥

ಇಂದು ನಮ್ಮ ಸದದೃಷ್ಟದಿಂದ ಸುಂದರಾಂಗನಾದ ಶಾಂತಚಿತ್ತನಾದ ನಿನ್ನನ್ನು ಕಂಡೆವು!

ಯಯಾತಿ॥ ಓಹೋ! ನೀವು ರಾಕ್ಷಸಕನ್ಯೆಯರೋ? ಅದಕ್ಕೇ ಈ ಮಾಯಾವಿಗಳ ಮಾತುಗಳು!

ದೇವ॥ ಮಂಗಳಾಂಗನೆ! ಹಿಂದೆ ಹಾಳುಭಾವಿಯಲ್ಲಿ ರಾಕ್ಷಸಿಯರಿಂದ ವ್ಯಥೆಯನ್ನು ಹೊಂದಿದ್ದ ನನ್ನನ್ನು ಕಾಪಾಡಿದುದನ್ನು ಸ್ಮರಿಸುವನಾಗು! ಅಂದೇ ನನ್ನ ಚರಿತ್ರೆಯನ್ನೆಲ್ಲಾ ತಿಳಿಸಿರುವೆನಷ್ಟೆ?

ಯಯಾತಿ॥ ಅಹುದು! ತಿಳಿಸಿರುವೆ!

ದೇವ॥ ಅಂದಿನಿಂದಲೂ;

ಕಂ॥ ಭೂಪಾಮನ್ಮಥರೂಪಾ ।
ಕಾಪಾಡುವ ಶೀಲಮಿರ್ದುಮಾಸುಮಶರನಾ ॥
ತಾಪಾಗ್ನಿಗಾಹುತಿಯಗೈ ।
ದೀಪಾಂಗಿನೊಳಾಹಹಿಂಸೆಗೊಳಿಪುದೆನನ್ನಂ ॥ ೬೯ ॥

ಯಯಾತಿ॥ ಛೀ ಛೀ ಭ್ರಷ್ಟಳೆ! ನೀನೇನು? ರಾಕ್ಷಸಿಯರ ಗುರುವೋ?

‡ ಕಂ॥ ಗೋಳಾಡುವಳಂ ಕುಳಿಯೊಳ್ ।
ನಾಲೀಕಾಂಬಕಿಯೆನುತ್ತೆತೆಗೆಯಲ್ತ್ವದ್ದು ॥

‡ ರಾಗ ಹಮ್ಮೀರಕಲ್ಯಾಣಿ, ಆದಿತಾಳ (ನಿದುರಲೇಕನೇನುಂಟರಾ ॥)
ತರವೇನೆ ತರುಣೀಮಣೀ । ಪರ ಪುರುಷರನು ನೀಂ ಮೋಹಿಸುವುದು ॥ ಪ ॥ ಆರಿಲ್ಲದಿರುವಾ । ಘೋರಾಟವಿಯೊಳ್ ॥ ಚೀರುತ್ತಿರಲ್ಪೊರೆಯು । ಲಾರಯು ಲಿದು ॥ ೧ ॥ ನೀನಾರೊ ಪೇಳೌ । ಮಾನವಿಯೊದು ॥ ದಾನವಿಯೊ ಅನು । ಮಾನವಾಗಿದೆ ॥ ೨ ॥ ಆಲೋಚಿಸದೇಂ । ಪಾಲಿಸೆ ನಿನ್ನನು ॥ ಮೇಲಲ್ಲ ದೀದು । ಶ್ರೀಲವ ತೋರ್ಪೆ ॥ ೩ ॥ ಪೋಗಿಲ್ಲಿ ನಿಲ್ಲದೆ । ಬೇಗನೆ ನಿನ್ನಯ ॥ ಆಗಾರಕಲ್ಲದಿರ । ಲೀಗಳ್ ಶಿಕ್ಷಿಪೆಂ ॥ ೪ ॥

ಶ್ರೀಲವತೋರ್ಪಡಿಪಾರಯ ।
ದಾಲಯಕೈದಲ್ಲದಿರ್ದೊಡಾಂಶಿಕ್ಷಿಸುವೆಂ ॥ ೨೦ ॥

ದೇವ॥ ಮಹಾಭಾಗನೆ! ನಿನ್ನ ಪದಾಶ್ರಿತೆಯಾದ ನನ್ನನ್ನು ಏನಾದರೂ ಮಾಡಬಹುದು.

* ಸುಮಶರಭಾಸಮಾನಸುಕುಮಾರ ಶರೀರ ಕುಶೇಶಯಾಂಬಕಾ ।
ಹಿಮಕರವಕ್ತ್ರ ವಾರಣಕರೋಪಮಬಾಹು ಯುಗಾರ್ಕವತ್ಸವಿ ॥
ಕ್ರಮ ಗಿರಿರಾಜಧೀರ ಕರುಣಾಕರ ವೈರಿವನಾಗ್ನಿ ನಿನ್ನನೇ
ವಿಮಲ ಚರಿತ್ರ ನಂಬಿದವಳಂ ಪೊರೆಯೈ ಕೃಪೆಯಿಂ ಮನೋಹರಾ ೨೧

ರಾಜಂ ॥ ಎಲೌ ರಮಣೀಮಣಿ! ನಿನ್ನಿಷ್ಟವು ನಿಜವಾಗಿಯೂ ನಡೆಯತಕ್ಕುದಲ್ಲವು. ಇದೇನು? ಸ್ವೈರಾಚಾರವನ್ನನುಸರಿಸಿದೆ? ಕುಲಕಾಂತೆಯರಿಗೆ ಇದು ತಕ್ಕುದಲ್ಲವು! ಸುಮ್ಮನೆ ನಿನ್ನ ಗೃಹಕ್ಕೆ ಹೊರಡುವೆಯೋ? ಇಲ್ಲವೋ? ತಡಮಾಡಿದರೆ ನ್ಯಾಯಶಾಸ್ತ್ರಜ್ಞರಾದ ಮಹಾತ್ಮರ ಅಜ್ಞಾಧೀನನಾದ ನಾನು ರಾಜನೀತಿಯನ್ನನುಸರಿಸಿ ನಿನ್ನನ್ನು ಶಿಕ್ಷಿಸುವೆನು!

ದೇವ ॥ ‡ ವೃ ॥ ಏನನಾದೊ[illegible]ಗಿಸ್ಯೆ ತವಪಾದಪಂಕಜಯುಗ್ಮಮಂ ।
ಮಾನವೇಂದ್ರನೆನಂಬಿದೆಂ ದಯೆಯಿಂ ನಿವಾರಿಸುಕಷ್ಟಮಂ ॥
ದೀನರಕ್ಷಕನೆಂಬಭಾರಣೆ ಯೊಂತೆಯಲ್ತೆ ದಯಾಬ್ಧಿಯೇ ।
ನೀನೆಸಂಹರಿಸಲ್ಕೆ ಸಂತಸಮಾಂಪೆನಂಗಜಬಾಧೆಯಿಂ॥೨೨॥

---

* ರಾಗ ಹಿಂದುಸ್ಥಾನಿ ಆದಿತಾಳ ( ಮೈವಾರೆಸಖಿ । ಕೋನಾನಗಲಿಗಯೋಷ ॥ )
ಸುಂದರನಿನ್ನ ಪಾದಪಂಕಜವಿಡಿದೆಂ ॥ ಪ ॥ ಮಾರಸ್ವರೂಪ । ಚಾರುಕಲಾಪ । ಭೀರು ಜನಾಳಿಯಪಾಲಿಪ ॥ ೧ ॥ ವಾರಣಕರನಿಭ । ಸಾರಬಾಹುಯುಗ ॥ ಸಾರಸಾಪ್ತಸಮತೇಜ ॥ ೨ ॥ ನಂಬಿದೆ ನಿನ್ನನೆ । ಅಂಬುಜವದನನೆ ॥ ಕಂಬುಗಳಗುಣಪೂರಿತನೆ ॥ ೩ ॥

‡ ರಾಗ ಭೈರವಿ ಆದಿತಾಳ ( ಇಂತಪಂತಮೇಲ । ಪ್ರಾಣಕಾಂತುಡಾ ॥ )
ನಿನ್ನ ಭೀಷ್ಟದವೊ । ಲೆನ್ನನಾಗಿಸ್ಯೆ ॥ ಗನ್ನ ನಿನ್ನ ಪಾದ । ವನ್ನು ನಂಬಿದೆನೊ ॥ಪ॥ ದೀನರಕ್ಷಣನೆ । ಜ್ಞಾನಸಾಗರನೆ॥ಧ್ಯಾನಿಸುತಮಿರ್ದೆಂ । ಸಾನುರಾಗದಿಂದಂ ॥೧॥ ಮಾರಬಾಧೆಯನಾಂ । ಸೈರಿಸಲಾರೆನೋ ॥ ಕಾರುಣ್ಯಾಂಬುಧಿಯೆ । ತೋರುದಯೆಯೆನ್ನೊಳ್॥ ೨॥ಕ್ರೂರಮದನಂಕೊಲ್ವ । ದಾರಿಯಿಂ ನೀನೆನ್ನಂ ॥ ಮಾರವಮಾಡೆ । ಸಾರಸಂತಸವೈ ॥ ೩ ॥

ಸಖಿ॥ ಮಹಾತ್ಮನೆ! ನೀನಾರು? ಚಕ್ರವರ್ತಿಲಕ್ಷಣಂಗಳುಳ್ಳ ನೀನು ಒಬ್ಬನಾಗಿ ಅಗಾಗ್ಗೆ ಇಲ್ಲಿಗೆ ಬರಲಿಕ್ಕೆ ಕಾರಣವೇನು? ನಿನಗೆ ಆವ ಕಾರ್ಯವು ಅವಶ್ಯಕವೋ ಅದನ್ನು ನಡೆಯಿಸುವೆವು! ದಯೆಯಿಂದ ತಿಳಿಸುವನಾಗು?

ಯಯಾತಿ॥ ಕಂ॥ ನಹುಷಾನ್ವಯದುಗ್ಧಾಂಬುಧಿ ।
ತುಹಿನಕರಂ ಲೋಕವಿನುತಚರಿತಂ ವಿಮಳಂ ॥
ಮಹಿಪಾಲರೊಡೆಯನುರುಸ ।
ನ್ಮಹಿಮಂ ಖ್ಯಾತಂ ಯಯಾತಿ ಭೂಮೀನಾಥಂ ॥ ೩೩ ॥

ಸಖಿ॥ ಹಾಗಾದರೆ ನನ್ನ ವಯಸ್ಯೆಯು ತಕ್ಕುದನ್ನೇ ಯೋಚಿಸಿದಳು. ದೈವಸಂಕಲ್ಪವು ಊಹಾತೀತವಾದುದು.

ಯಯಾತಿ॥ ಎಲೌ ರಮಣಿ! ನಿನ್ನ ವಚನವು ಹಾಸ್ಯಾಸ್ಪದವಾಗಿರುವದು. ಬ್ರಾಹ್ಮಣ ಸ್ತ್ರೀಯು ಕ್ಷತ್ರಿಯನ ಆಶ್ರಯನ್ನಪೇಕ್ಷಿಸುವದು ಸನ್ನೀತಿಯೋ? ಸಮಸ್ತ ನೀತಿಜ್ಞರಾದ ಶುಕ್ರಾಚಾರ್ಯರ ಪುತ್ರಿಯೆಂದುಸಿರ್ವೆ? ಬ್ರಾಹ್ಮಣನು ನಾಲ್ಕು ವರ್ಣದವರಲ್ಲಿಯೂ ಸ್ತ್ರೀಯರನ್ನು ಪರಿಗ್ರಹಿಸಬಹುದೆಂದು ಕೇಳಿರುವೆನು.

ದೇವ ॥ ಮಹಾರಾಜನೆ! ಲಾಲಿಸಬೇಕು!

ಕಂ ॥ ಗುರುಸುತನಿಂ ಭೂಪತಿಯೇ ।
ವರನಾಗುವತೆರದೆ ಶಾಪವಾಂತಿರ್ದಪೆನಾಂ ॥
ನರಪತಿನೀಂ ವರನೆನುತಂ ।
ನೆರೆನಂಬಿರ್ಪೆಂ ಕೃಪಾವಲೋಕದೆಪೊರೆಯೈ ॥ ೩೪ ॥

ಸಖಿ॥ ಮಹಾರಾಜನೆ! ಶರಣಾಗತರನ್ನು ಕಾಪಾಡತಕ್ಕುದು ರಾಜರಿಗೆ ಅದರಲ್ಲಿಯೂ ನಿನ್ನಂತಹ ಮಹನೀಯರಿಗೆ ಸರಿಯಾದುದು.

ಯಯಾತಿ॥ ಎಲೌ ರಮಣಿಯರೆ! ನೀವು ರಾಕ್ಷಸಾಶ್ರಮವಾಸಿಗಳಾದುದರಿಂದ ನಿಮ್ಮ ಮಾತುಗಳನ್ನು ನಂಬಲಾರೆನು! ಸಮಸ್ತ ನೀತಿಜ್ಞರಾದ ಶುಕ್ರಾಚಾರ್ಯರು ಈ ಸಂಬಂಧವು ವಿಹಿತವೆಂದು ಅನುಮೋದಿಸಿ ಆಜ್ಞಾಪಿಸಿದರೆ ಆಗ ನಿಮ್ಮಿಷ್ಟವು ಸಿದ್ಧಿಸುವುದು! ಇನ್ನು ನಾನು ಹೊರಡುವೆನು!

( ಎಂದು ಹೊರಟು ಹೋದನು. )

( ಇಬ್ಬರು ಸಖಿಯರ ಪ್ರವೇಶಂ )

೧ ನೆ ॥ ಏನು ಸಖಿ! ಇತ್ತಕಡೆ ಹೊರಟಿರುವೆ?

೨ ನೆ ॥ ನಮ್ಮ ಮಹಾಮಾತೃಶ್ರೀಯವರ ಅಪ್ಪಣೆಯಂತೆ;

೧ ನೆ ॥ ಏತಕ್ಕೆ?

೨ ನೆ ॥ ಶ್ರೇಷ್ಠವಾದ ಗೋಕ್ಷೀರವನ್ನು ತರುವುದಕ್ಕೆ.

೧ ನೆ ॥ ಅದೇನು?

೨ ನೆ ॥ ಸಖಿ! ಆಕೆಗೇನು? ಜ್ವರವೋ? ನಿಟ್ಟುಸಿರಿಡುತ್ತಾ ಪಾಸಿನಲ್ಲಿಯೇ ಪವಡಿಸಿರುವಳು.

೧ ನೆ ॥ ಪ್ರಿಯೆ! ನಿನಗೆ ತಿಳಿಯಲಿಲ್ಲವೋ ಕಾಮಜ್ವರವೆಂಬುವದು?

೨ ನೆ ॥ ಆಕೆಯು ಪ್ರಾಪ್ತವಯಸ್ಕಳಾಗಿರುವದರಿಂದ ನಿನ್ನ ಮಾತನ್ನೇ ನಿಜವೆಂದೂಹಿಸಬೇಕಾಗಿದೆ.

ಕಂ॥ ಒಲ್ಲಳ್ ವಿಭೂಷಣಂಗಳ ।
ನೊಲ್ಲಳ್ ಸುರಭಿಪ್ರಸೂನ ಗಂಧಾದಿಗಳಂ ॥
ಒಲ್ಲಳ್ ಸರಸವನಾ[illegible]ಳು ।
ವೊಲ್ಲಳ್ ಮತ್ತಾವ ಸುಖಮುಮಂ ಸಖಿಸತತಂ ॥ ೭೫ ॥

ಇದಕ್ಕೆ ಏನು ಕಾರಣವೋ ತಿಳಿಯದು. ಆ ಗುರುಪುತ್ರನಿಂದ;

೧ ನೆ ॥ ಅಲ್ಲ ಅಲ್ಲ.

೨ ನೆ ॥ ಇನ್ನೇನು?

೧ ನೆ ॥ ಮೊನ್ನೆಯ ದಿನ ನಮ್ಮ ಒಡತಿಯೂ ನಾನೂ ವನವಿಹಾರಕ್ಕಾಗಿ ಹೋಗಿದ್ದೆವು. ಅಲ್ಲಿ ಒಬ್ಬ ಮಹಾರಾಜನನ್ನು ಕಂಡು ಮಾತಾಡಿದೆವು. ಅಂದಿನಿಂದಲೂ;

೨ ನೆ ॥ ಆತನೇನು ಸುಂದರನೋ? ಸರಿ! ನಾನು ಹುಚ್ಚಳಾದೆನು. ಹಂಸವು ಬಕವನ್ನಾಶ್ರಯಿಸುವದೇ? ಆತನು ಆರೋ ಚಕ್ರವರ್ತಿಯೇ ಆಗಿರಬಹುದು.

೧ ನೆ ॥ ಅಹುದು. ಈ ಭರತಖಂಡವನ್ನಾಳುವ ಯಯಾತಿಯೆಂಬ ಸಾರ್ವಭೌಮನೇ ಆತನು.

೨ ನೆ ॥ ಒಳ್ಳೆಯದು ಸಖಿ. ರನ್ನಕ್ಕೆ ಚಿನ್ನವೇ ಅನುಕೂಲವಾಯಿತು. ನಾನೂ ಸಂತೋಷಿತಳಾದೆನು! ಅನುಕೂಲ ದಾಂಪತ್ಯವಾಯಿತೋ? ಆಕೆಗೆ ಗುರುಪುತ್ರನ ಶಾಪವಿರುವದರಿಂದ ಕ್ಷತ್ರಿಯರಿಗೆ ಯೋಗ್ಯವಾದ ಗಾಂಧರ್ವ ಸ್ವಯಂವರ ಇವುಗಳಲ್ಲಿ ಆವುದಾದರೂ ಆಗಬಹುದಲ್ಲವೆ?

೧ನೆ॥ ನೀತಿಜ್ಞನಾದ ಆಕೆಯ ತಂದೆಯ ಅನುಮತಿಯಾದ ಮೇಲೆಯಲ್ಲವೆ ಸ್ವಯಂವರ?

೨ನೆ॥ ಇನ್ನೂ ಆತನಿಗೆ ಈ ವಿಷಯವು ತಿಳಿಯದೋ? ಜ್ಞಾನಿಗಳಿಗೆ ತಿಳಿಯದುದಾವುದಿರುವುದು?

೧ನೆ॥ ಹೇಗೋ? ಈಕೆಯ ಅವಸ್ಥೆಯನ್ನು ಆ ಮಹಾತ್ಮನಿಗೆ ನಾವೂ ಅರಿಕೆ ಮಾಡುವುದೊಳ್ಳೆಯದಲ್ಲವೆ?

೨ನೆ॥ವೃ॥ನಿಡುಸುಯ್ಯ್ಗಳ್ ಬಲವಾಗಿರಲ್ ಮದನಬಾಣೋದ್ಘಾತದಿಂವಾಣಿತಾ
ನುಡುಗಿದ್ದಪ್ಪುದದೆಂಬ ಪಾಂಗಿನೊಳೆ ಮಾತಾಡಲ್ಕೆತಾನೊಲ್ಲದೆ ॥
ವ್ಮೊಡನೆಂದುಂ ಮುಸುಕಿಟ್ಟು ಪಾಸಿನೊಳಗಿರ್ಪಳ್ ಭುಂಜಿಸಳ್ಕ್ಷೀರಮಂ ।
ಕುಡಿಯಳ್ ದೇವಿಯದೆಂತು ಜೀವಿಸುವಳೋ ಕಾಮಜ್ವರಾವೇಶದಿಂ ॥ ೭೬ ॥

೧ನೆ॥ ಈಗಲೇ ಹೋಗಿ ಆಚಾರ್ಯರವರಿಗೆ ಈ ಸಂಗತಿಯನ್ನು ವಿಜ್ಞಾಪಿಸಿ ನಮ್ಮ ದೇವಿಗೆ ಪ್ರಿಯವನ್ನಾಚರಿಸಬೇಕು.

೨ನೆ॥ ಹಾಗಾಗಲಿ. ( ಎಂದು ಹೊರಟುಹೋದರು. )

( ಯಯಾತಿ ತನ್ನ ಮಿತ್ರನಾದ ವಿದೂಷಕನೊಡನಿರುವನು. )

ಯಯಾತಿ॥ ಮಿತ್ರನೆ. ಬಹಳ ಶ್ರಮವಾಗಿರುವುದು.

ವೃ॥ ಬಾಯ್ಗಿನಿದಿಲ್ಲವೋಗರಮದೆಂತಿರೆಯುಂ ನೆರೆನಿದ್ರೆಬಾರದೈ ।
ಮೆಯ್ಗನುವಿಲ್ಲದಾಂತಿರುಗುತಿರ್ದೆನಿರುಳ್ ಬಹುಕಾರ್ಯಕಾರಿವೊಲ್ ॥
ಕೆಯ್ಗೊಳದೆಂತು ಮಂಗಮುಕಟಾ ಸೊಗಮಂ ವಿಕಲಾಂತರಂಗಮುಂ ।
ನೆಯ್ಗೊಡಮಗ್ಗಿಗಿಟ್ಟವೊಲೆಕಾಯ್ದುರೆಬೆಂದಪೆನೆಂತು ಬಾಳ್ವೆನೋ ॥ ೭೭ ॥

ವಿದೂ॥ ಮಹಾರಾಜನೆ. ಏನು ಹೀಗೆ ಹೇಳುವೆ? ನಿನ್ನ ಬಲಗೈಯನ್ನು ಕೊಡು.

( ಎಂದು ತನ್ನ ಕೈಚಾಚುವನು. )

ರಾಜಂ॥ ( ನಗುತ್ತ ) ನಿನಗೆ ನಾಡಿಗಳ ಪರೀಕ್ಷೆ ತಿಳಿವುದೇ?

ವಿದೂ॥ ಸರಿ! ನನಗೆ ತಿಳಿಯದೆ? ಎಲ್ಲಿಕೈ? ( ಎಂದು ಕೈ ಹಿಡಿದುನೋಡಿ ) ಹಿ! ಹಿ! ತಿಳಿಯಿತು! ತಿಳಿಯಿತು! ತಿಳಿದಂತೆಯೇ ಇರುವುದು! (ಎಂದು ನಗುತ್ತಿರುವನು)

ರಾಜಂ॥( ನಗುತ್ತಾ )ಎಲೈ ಚಪಲನೆ! ನಿನಗೆ ತಿಳಿದುದೇನು? ಹೇಳು?

ವಿದೂ॥ ಅಯ್ಯ. ನೀನು ಮಹಾರಾಜ. ನಿಜಸ್ಥಿತಿಯನ್ನು ಹೇಳಿದರೆ ಒಂದು ತಂಟೆ. ಹೇಳದಿದ್ದರೆ ಒಂದು ತಂಟೆ. ನಾನೇಕೆ ಹೇಳಬೇಕು? ನಿನ್ನ ಮನಸ್ಸಿಗೆ ನೀನೇ ದೃಢಪಡಿಸಿಕೊಳ್ಳುವನಾಗು. ನಾನು ಏನೂ ತಿಳಿಯದವನಂತೆ ಬಾಯಿಮುಚ್ಚಿಕೊಂಡು, ಕಣ್ಣುಗಳನ್ನು ಪಿಳಿಪಿಳನೆ, ಬಿಟ್ಟುಕೊಂಡು, ಹುಬ್ಬುಗಳನ್ನು

ಹಾರಿಸಿಕೊಂಡು, ಕೈಕಟ್ಟಿಕೊಂಡು, ಸುಮ್ಮನೆ ಕುಳಿತಿರುವೆನು. ಭಗವಂತ ನನ್ನ ಧ್ಯಾನ ಮಾಡಲಿಕ್ಕೆ ಬಾಯಿ ಸ್ವಲ್ಪವಾಗಿ ಅಲ್ಲಾಡಿಸಬೇಕಾಗುವದು. ಅದಕ್ಕೆ ಮಾತ್ರ ಸ್ವಲ್ಪ ಅಪ್ಪಣೆ ಕೊಡು.

ರಾಜಂ॥ (ನಸುಕೋಪದಿಂದ) ಎಲಾ ಚಪಲನೆ! ನಿನಗೆ ತಿಳಿದಂಶವನ್ನು ಹೇಳೆಂದರೆ?

ವಿದೂ॥ ಅಬ್ಬಬ್ಬ! ಇನ್ನು ಹೇಗಪ್ಪ? ಮಹಾರಾಜನು ಅಭಯ ವರವನ್ನು ಕೊಟ್ಟರೆ;

ರಾಜಂ॥ ನಿನಗೆ ಭಯವೇನಿರುವದು?

ವಿದೂ॥ ಹಾಗಾದರೆ ಹೇಳುತ್ತೇನೆ (ಎಂದು ಮತ್ತೆ ಕೈಹಿಡಿದು ನೋಡಿ) ವಾತನಾಡಿ ತನ್ನ ಕೆಲಸವನ್ನು ತಾನು ಮಾಡುತ್ತದೆ. ಪಿತ್ತನಾಡಿಯೊಂದು ಮಾತ್ರ ಉದ್ರೇಕವಾಗಿ ಅವುದೋ ಒಂದು ಹೆಣ್ಣು; ಅಲ್ಲ ಅಲ್ಲ. ನಾಲಿಗೆ ತಪ್ಪು ಕ್ಷಮಿಸು. ಮಹಾರಾಜ. ತನ್ನ ಪ್ರಿಯೆಯೊಡನಾಡಬೇಕೆಂದು ನಿನ್ನ ಮನಸ್ಸನ್ನು ಎಳೆಯುತ್ತಿರುವುದು. ನೀನು ಕಾಮಜ್ವರ ಪೀಡಿತನಾಗಿರುವದು ನಿಜವೇ ಅಯ್ಯಾ. ನಾನು ಬ್ರಾಹ್ಮಣ, ಸುಳ್ಳನ್ನು ಹೇಳುವವನಲ್ಲವು. ಇನ್ನೂ ಪ್ರಮಾಣಮಾಡಿ ಹೇಳೆಂದರೂ ಹೇಳುತ್ತೇನೆ.

ರಾಜ॥ ಇದೇನೋ ನಿನಗೆ ತಿಳಿ[illegible]ು? ಮಹಾ ವೈದ್ಯನೆಂದು ಹೇಳಿಕೊಂಡೆಯಲ್ಲಾ?

ವಿದೂ॥ ಅಹುದು. ನಾನು ವೈದ್ಯರಿಗೊಡೆಯನು. ಆರಿಗೆ ಆವ ವಿಷಯ ತಿಳಿಯದಿದ್ದರೂ ನನ್ನಲ್ಲೇ ಬಂದು ಕೇಳಿ ತಿಳಿದುಕೊಂಡು ಹೋಗಬೇಕೆಂದು ನಾನು ಕೋರುತ್ತೇನೆ. ನನ್ನ ಮುಖವು ಶತಭಿಷಗುಪೇತನಾದ ಆ ಶೀತಕರನ ಕಳೆಯನ್ನು ನಗಿಸುತ್ತಿರುವದು! ನೋಡು. ನನಗಿರುವಷ್ಟು ಹೊಟ್ಟೆಯು ಆ ಚಂದ್ರನಿಗಾಗಲಿ ಆ ಧನ್ವಂತರಿಗಾಗಲಿ, ಕಡೆಗೆ ನಿನಗಾಗಲಿ ಇರುವದೋ? ಮಹಾರಾಜನಾದ ನೀನೇ ನಿಜವಾಗಿ ಹೇಳು! ನನ್ನ ಹೊಟ್ಟೆಯು ಕಳೆಯೇ ನನ್ನ ತಿಳುವಳಿಕೆಯನ್ನು ವ್ಯಕ್ತಪಡಿಸುವದಿಲ್ಲವೆ?

ರಾಜಂ॥ ಛೀ! ಚಪಲನೆ! ನಿನ್ನ ಹಾಸ್ಯವಾಗ್ಜಾಲವನ್ನು ನಿಲ್ಲಿಸು. ನನ್ನ ಪರಿತಾಪವನ್ನು ಹೋಗಲಾಡಿಸಿಕೊಳ್ಳುವದೆಂತು? ಮೃಗಯಾವಿಹಾರದಲ್ಲಾದರೂ ಹೊತ್ತನ್ನು ಕಳೆಯುವಂತೆ ಯೋಚಿಸಲೇ?

ವಿದೂ॥ ಅಬ್ಬಬ್ಬ! ಆ ಸುದ್ದಿ! ಆ ಬೇಟೆಸಮಾಚಾರ ಮಾತ್ರ ನನ್ನಿದಿರಿಗೆ ಎತ್ತಬೇಡಪ್ಪ. ನಿನ್ನ ಜ್ವರವು ಶಾಂತವಾಗುವದಕ್ಕೆ ಇಲ್ಲಿಯೇ ಏನಾದರೂ ಶ್ರಮಪಡುವೆನಲ್ಲದೆ, ಕಾಡು ಹಂದಿಯಂತೆ ಅಡವಿಯಲ್ಲಿ ಅಂಡಲೆಯಲಾರೆನು. ಮೊದಲೇ ವ್ಯಥೆಪಡುವ ನೀನು ಬಹು ಗಹನವಾದ ಅರಣ್ಯವನ್ನು ಸೇರಿ ಬಿಸಿಲು ಕಲ್ಲು ಮುಳ್ಳುಗಳ ಬಾಧೆಯನ್ನ ಸಹಿಸುವುದು ಅಸಾಧ್ಯವು! ಸುಮ್ಮನೆ ಕುಳಿ

ತುಕೊಂಡು ಮಾತನಾಡುವುದಕ್ಕೇನು? ಆದರ ಕಷ್ಟ-ಸುಖಗಳನ್ನು ಅನುಭವಿಸಿದ ನನಗೇ ಗೊತ್ತು.

ರಾಜಂ॥ ಹಾಗಾದರೆ ನನ್ನ ತಾಪಕ್ಕೆ ಚಿಕಿತ್ಸೆಯನ್ನು ಏನು ಮಾಡುವೆ?

ವಿದೂ॥ ನಿನ್ನ ಮನಸ್ಸಿನಲ್ಲಿರುವುದನ್ನು ಮರೆಮಾಚದೆ ಸೂಚಿಸಿದರೆ ಆ ಕಾಮಜ್ವರಕ್ಕೆ ತಕ್ಕ ಶಾಂತಿಕ್ರಮುವನ್ನಾಚರಿಸುವೆನು. ಹೇಳು. ಇಲ್ಲಿ ನಾವಿಬ್ಬರೇ ಇರುವೆವಷ್ಟೆ! ( ಎಂದು ಸುತ್ತಲೂ ನೋಡಿ ) ನೀನು ಆರನ್ನು ನೋಡಿದಂದಿನಿಂದಲೂ ನಿನ್ನ ದೇಹಸ್ಥಿತಿ ಹೀಗಾಗಿದೆ.

ರಾಜಂ॥ ಎಲಾ ಚಪಲನೆ ಉಪಾಯದಲ್ಲಿಯೇ ನನ್ನ ರಹಸ್ಯವನ್ನು ಹೊರಪಡಿಸುವೆಯಾ. ಹು. ನೀನಲ್ಲದೆ ನನಗೆ ನರ್ಮಸಚಿವರಿನ್ನಾರಿರುವರು? ಮೊನ್ನೆಯದಿನ; ( ಎಂದು ಅಂಗಚಲನವನ್ನು ಸೂಚಿಸಿ ) ಎಲೈ ಮೈತ್ರೇಯನೆ!

ಕಂ॥ ಬಲದೋಳ್ಪಾರುತ್ತಿರ್ಕು೦ ।
ಚಲಿಕುಂ ಮೋಣಿಡದನೇತ್ರಮುಂಕತಮೋನೋ ॥
ಮೊಳೆಯಲ್ ಮುದಮುಂ ಭಯಮುಂ ।
ಗೆಳೆಯಾ ಉಯ್ಯಲೆಯ ಪರಿಯೊಳ್ ... ಯ್ಯಾಚಿತ್ತಂ ॥ ೭೮ ॥

(ತೆರೆಯಲ್ಲಿ) ‡ ವೃ॥ ಜಯಜಯಜಾನಕೀಶ,ಪರಮೇಶ,ಗಿರೀಶನಿವಾಸವಂದಿತಾ।
ಜಯಜಯ ಭಕ್ತಪಾಲ, ಕಮಲಾಸುಖಲೋಲ, ಗುಣಾಲವಾಲನೇ ॥
ಜಯಜಯ ಲೋಕರಕ್ಷಣ ವಿಚಕ್ಷಣ ಸಕ್ಷಮಪಕ್ಷಿಪತ್ರನೇ ।
ಜಯಜಯ ರಾಕ್ಷಸಾಂತಕ ಸುರಾಸುರಪೋಷಕ ಮುಕ್ತಿದಾಯಕಾ ೭೯

ರಾಜಂ॥ (ಕೇಳಿ) ಮಿತ್ರನೆ. ಇದೇನು? ಜಯಜಯನಿನಾದವು?

ವಿದೂ॥ ನೋಡಿಬರುವೆನು! (ಎಂದು ಹೊರಗೆ ಹೋಗಿ ಬರುತ್ತಾ ಸಂತೋಷದಿಂದ)

---

‡ ರಾಗ ಇಂಗ್ಲೀಷ ನೋಟು.

( ಓಮಾರ-ಕುಸುಮಶರ-ವಿಷಮುಮುತರಮಟರ-ಮಾನಮೇರ-ಚಾಲೂರ ॥ ಪ॥ )
ಶ್ರೀರಾಮ-ಸುರಧಾಮಾ-ಮರಮುನಿನುತಪರಮ। ವೀರಸೋಮ। ಮಾರಾಮ॥ಪ॥ ಮುನಿಯಾಗಕ್ಕಸುವಿಂದೈದು-ತನಃಕೂಲವಮಾಳ್ದ ॥ ಜನಪನೆಸ-ನ್ನುನಿಪಾಲನೆಹೇ-ಘನ-ದಯಾ-ವನ-ಧಿಯೆ ॥ ೧ ॥ ಎಳೆಯುನನೀಂ-ಹಳುವದೆಪೊರೆ-ಯೆಲೊಎಂದಾರೊರೆದರ್ ॥ ಜಲಜೋದರ-ಮಲಿನಹರನೀಂ-ಚಲ-ಮುಳಿ-ದೆಮ್ಮಂ-ಪೊರೆ ॥ ೨ ॥ ಜಯಶಂಕರ-ಭಯಪರಿಹರ-ಮಯುಪತಿವಿನುತಾ ॥ ಜಯಸೇವಿತ-ಜಯಂತಾಪ್ತಾ। ರಯ-ದೆನೀ-ಪೊರೆ-ವರ ॥ ೩ ॥

ಸ್ವಾಮಿಧ್ಯಾನತತ್ಪರರಾದ ಭಾಗವತರು ಇಂದು ಶ್ರೀ ನೃಸಿಂಹಜಯಂತ್ಯುತ್ಸವದ ದಿನವಾದುದರಿಂದ ಅಧಿಕ ಸಂತೋಷದೊಡನೆ ನಾರಾಯಣ ಧ್ಯಾನವನ್ನು ಮಾಡುತ್ತಾ ಶ್ರೀ ನೃಸಿಂಹೋತ್ಸವವನ್ನು ಮಾಡಿಕೊಂಡು ಬೀದಿಯಲ್ಲಿ ಹೋಗುತ್ತಿರುವರು.

* ಹಿ! ಹಿ! ಹೇಗೂ ನನಗೆ ಈ ದಿನ ಹಬ್ಬದೂಟ! ಅತ್ಯಾನಂದ! ಕಡುಬುಗಳಿಂದಲೇ ಈ ಮುದ್ದಿನ ಹೊಟ್ಟೆಯನ್ನು ತುಂಬಿಸಿಕೊಳ್ಳುವೆನು. ಮಿತ್ರನೆ. ನನಗೆ ಎರಡು ಕಡೆ ಔತಣದ ಊಟವೊದಗಿತು.

ರಾಜಂ॥ ಎಲ್ಲೆಲ್ಲಿ?

ವಿದೂ॥ ಶ್ರೀ ನೃಸಿಂಹೋತ್ಸವದ ಸಂತರ್ಪಣೆಯೊಂದು, ನಿನ್ನ ಒಸಗೆಯುದೊಂದು!

ರಾಜಂ॥ ನನ್ನ ಮನಸ್ಸೇ ವಿಕಲ್ಪವಾಗಿರುವುದೆಂದು ಆಲೋಚಿಸುತ್ತಿರುವಾಗ ಒಸಗೆ ಯಾವುದು?

ವಿದೂ॥ ಮಿತ್ರನೆ. ಕಳವಳವೇಕೆ? ನಿಜವಾಗಿ ಈ ದಿನ ಸಂತೋಷಕರವಾದ ವಾರ್ತೆ ತಿಳಿವುದು.

ರಾಜಂ॥ ಅದು ಹೇಗೆ?

ವಿದೂ॥ ಈಗಿನ ಶುಭಶಕುನಂಗಳಿಂದ ನಿರ್ಧರಿಸಿದೆನು. (ಎನ್ನುವಷ್ಟರಲ್ಲಿ)

ದ್ವಾರಪಾಲಕಂ॥ (ಪ್ರವೇಶಿಸಿ) ಮಹಾರಾಜನಿಗೆ ವಿಜಯವಾಗಲಿ! ಮಹಾತ್ಮರಾದ ಶುಕ್ರಾಚಾರ್ಯರ ಸಮ್ಮುಖದಿಂದ ಇಬ್ಬರು ಮುನಿಕುಮಾರರು ತಮ್ಮನ್ನು ಸಂದರ್ಶಿಸಬೇಕೆಂದು ಬಂದಿರುವರು.

ವಿದೂ॥ ಅದೋ ಬಂದಿತು! ಬಂದಿತು! ಏನೋ ಬಂದಿತು!

ರಾಜಂ॥ ಮಿತ್ರನೆ. ಆ ಮಹಾತ್ಮರನ್ನು ವೇದೋಕ್ತ ವಿಧಿಯಿಂದ ಉಪಚರಿಸಿ ಕರೆದುಕೊಂಡು ಬರುವವನಾಗು.

ವಿದೂ॥ ಅಪ್ಪಣೆ! (ಎಂದು ಎದ್ದು ಹೋಗಿ ಮುನಿಕುವರರೊಡನೆ ಬಂದು ಅವರೊಡನೆ) ಮಹಾತ್ಮರೆ! ಇತ್ತ ದಯಮಾಡಬೇಕು. ತಮ್ಮ ಬರುವಿಕೆಗಾಗಿ ಸಮಸ್ತ ವರ್ಣಾಶ್ರಮ ರಕ್ಷಕನಾಗಿ ಪೂಜ್ಯನಾದ ಸಾರ್ವಭೌಮನು ಮೊದಲೇ ಪೀಠವನ್ನು ಬಿಟ್ಟು ಕಾದಿರುವನು!

---

* ರಾಗ ಸುರಟಿ, ಆದಿತಾಳ (ಸಯಾಟಲಕುತಗುನಟರಾ। ನೇವೈಯಾರಿ।)
ಹಿ. ಹಿ. ಸಂತೋಷಮಿೊದಿನಮೆನಗೆ। ಹೊಟ್ಟೆ ಚಿಂತೆಯು। ಊಟದ ಚಿಂತೆಯು। ದೇನುಂಟೆನಗೆ॥ ಪ॥ ಹಬ್ಬದೂಟದಂ। ತಬ್ಬರಮುಪ್ಪುದು। ಇಬ್ಬರೊರೆವರೆನಗೆ॥ ಬಹುಕೊಬ್ಬುವೆ। ನುಣ್ಣಲುಬ್ಬುವ। ಹೊಟ್ಟೆಯುಬ್ಬುತ್ತೆ, ನೋಡ್ಯೆದೊರೆಯೇ॥೧॥

ಮುನಿಕುಮಾರರು॥ ಎಲೈ ಬ್ರಾಹ್ಮಣೋತ್ತಮನೆ! ಇದು ಸ್ತೋತ್ರಾರ್ಹವಾದುದೇ ಸರಿ. ಆದರೂ ಈ ವಿಷಯದಲ್ಲಿ ಸತ್ಯವನ್ನೇ ಹೇಳುವೆವು ಕೇಳು.

ಕಂ॥ ಸುಮಮುದಯಿಸೆ ಲತೆಗಳ್ ಕಣೆ ।
ಶಮನಾನಲ್ ಗಂಧಶಾಲಿಗಳ್ ಮೇಘಂಗಳ್ ॥
ವಿಮಲಾಂಬುವನಾಂತಾಗಳ್ ।
ಸುಮನರ್ ಸಿರಿಯೈಯ್ದೆ ತಲೆಯ ಬಾಗಿಸುತಿರ್ಪರ್ ॥ ೮೦ ॥

ಉತ್ತಮರಾದ ಪರೋಪಕಾರಿಗಳಿಗೆ ಇದು ಸಹಜವಾದುದೇ ಸರಿ!

ವಿದೂ॥ (ಮರೆಯಲ್ಲಿ) ಮಹಾರಾಜನೆ. ಈ ಮಹಾತ್ಮರ ಮುಖವು ಪ್ರಸನ್ನವಾಗಿರುವಂತಿರುವುದು. ಏನೋ ಶುಭವಾರ್ತೆಯನ್ನು ತಂದಿರುವಂತೆ ಕಾಣುವುದು.

ರಾಜಂ॥ (ವಿನಯದಿಂದ) ಮಹಾತ್ಮರಿಗೆ ನಮಸ್ಕರಿಸುವೆನು. ಈ ಪೀಠವನ್ನಲಂಕರಿಸಬೇಕು.

ಮುನಿಕುಮಾರರು॥ ನಿನ್ನ ಅಭೀಷ್ಟಂಗಳು ನೆರವೇರಲಿ.

ರಾಜಂ॥ ವೃ॥ ಮುನಿಗಳಯಾಗಕೇನೆಡರನ[illegible]ಸುತಿರ್ಪರೊರಾಕ್ಷಸಾಧಮರ್ ।
ವನದೆಸುಧರ್ಮಿಗಳ್ಗೆ ಕುವಿಘಾತಿಯೊ ದುಷ್ಟಮೃಗಾಳಿಯಿಂದದೇಂ ॥
ವಿನಮಿತವಾಗಿ ಪುಷ್ಪಫಲ ಮುಖ್ಯಮನೀಯದೆ ಮಾಣ್ದುವೋ ಲತಾ ।
ಗನಿವಹಮೆನ್ನಿನಿಂದುತಮಗಿಷ್ಟಮದೇಂ ಕೃತವಾಗವೇಳ್ಕುಮೋ ॥೮೧॥

ಕೃಪೆಯಿಟ್ಟು ಆಜ್ಞೆಮಾಡಿದಲ್ಲಿ ಶಿರಸಾವಹಿಸುವೆನು.

ಮುನಿ॥ ಕಂ॥ ಖ್ಯಾತಂ ನಹುಷಾನ್ವಯಸಂ ।
ಜಾತಂ ಪುರುಹೂತವಿನುತಚರಿತಂ ಸುಗುಣೋ ॥
ಪೇತಂ ಭಕ್ತಜನೇಪ್ಸಿತ ।
ದಾತಂ ನೀನಾಳ್ವಕಾಲದೆಡರೇನಿರ್ಕುಂ ॥ ೮೨ ॥

ರಾಜಂ॥ ಹಾಗಾದರೆ ನನ್ನ ರಾಜಶಬ್ದವು ಸಾರ್ಥಕವಾದುದು. ಮಹಾತ್ಮರ ತಪವು ನಿರ್ವಿಘ್ನವಾಗಿ ನೆರವೇರುತ್ತಿರುವುದೇ? ಪೂಜ್ಯರಾದ ಶುಕ್ರಾಚಾರ್ಯರು ಲೋಕಾನುಗ್ರಹಾರ್ಥವಾಗಿ ಕ್ಷೇಮದಿಂದಿರುವರೇ?

ಮುನಿ॥ ಮಹಾತ್ಮರಿಗೆ ಕ್ಷೇಮವೆಂಬುದು ಸ್ವಾಧೀನವಾಗಿರುವುದು. ಆ ಪೂಜ್ಯರಾದ ಶುಕ್ರಾಚಾರ್ಯರವರು ಕುಶಲಪ್ರಶ್ನಪೂರ್ವಕವಾಗಿ ಈ ಆಶೀರ್ವಾದ ಪತ್ರವನ್ನು ಕಳುಹಿಸಿರುವರು.

ರಾಜಂ॥ (ಮನಸ್ಸಿನಲ್ಲಿ) ಕಂ॥ ಎಲೆ ಹೃದಯವೆ ತಲ್ಲಣಮೇ ।
ಕೆಲೆ ಸುಜನರ್ಕೇಡನಾಗಲೆಳಸರದಾರ್ಗುಂ ॥
ಕಳವಳಮಂಬಿಡು ಮುನಿಗಳ ।
ಕಳಿಯಂ ನೋಡಲ್ಕೆ ಮೋದವಿಂಆವಂತಿರ್ಕುಂ॥೮೩॥

(ಪ್ರಕಾಶಂ) ಏನೆಂದಾಜ್ಞಾಪಿಸಿರುವರು?

ಮುನಿ॥ ಈ ಪತ್ರವನ್ನು ನೋಡತಕ್ಕದು.

ರಾಜಂ॥ ಅನುಗೃಹೀತನಾದೆನು! (ಎಂದು ತೆಗೆದುಕೊಂಡು) ಮಿತ್ರನೆ. ಓದುವನಾಗು. (ಎಂದು ವಿದೂಷಕನ ಕೈಗೆ ಕೊಡುವನು)

ವಿದೂ॥ ಅಪ್ಪಣೆ. ಲಾಲಿಸಬೇಕು. (ಎಂದು ಅದನ್ನು ಬಿಚ್ಚಿ)

ವೃ॥ ಸ್ವಸ್ತಿಶ್ರೀಮತ್ಸಮಸ್ತಕ್ಷಿತಿಪತಿಮುಕುಟನ್ಯಸ್ತಪಾದಾಂಬುಜಾತಂ ।
ವಾಸ್ತೋಸ್ಪತ್ಯಾದಿಮಾನ್ಯಂರಿಪುನಿವಹಕೃತಾಂತಂಸದಾಮೋದವಂತಂ ॥
ಸ್ವಸ್ತಿಸ್ಥಂ ರಾಜತೇಜಂ ವಿಬುಧಭರಣನವ್ಯಾಜಕಾರುಣ್ಯಪೂರ್ಣಂ ।
ವಾಸ್ತವ್ಯೋಕ್ತಂಗುಣಾಢ್ಯಂತವ್ರ್ಲಿಜಯಿಸುಗೊಳ್ಪಿಂಯಯಾತೀಶನೆಂದುಂ೮೪

ಮಹಾರಾಜನೆ. ಈ ಪತ್ರದ ಆದಿಯಲ್ಲಿನ ಒಕ್ಕಣೆಯ ವಚನಗಳೇ ನನಗೆ ಈಗಲೇ ಲಾಡು, ಮಂಡಿಗೆ, ಕಡುಬು, ಚಕ್ಕಲಿ, ಇವೆಲ್ಲಾ ತಿಂದಷ್ಟು ಸಂತೋಷವನ್ನುಂಟುಮಾಡುವವು.

ರಾಜಂ॥ ಆಗಲಿ. ಮುಂದೆ ಹೇಳು.

ವಿದೂಷಕಂ॥ ಸರಿ. ನಿನಗೆ ಶುಭವಾರ್ತೆಯ ಮೇಲೆಯೂ ಸುಖದ ಮೇಲೆಯೂ ಆಶೆ; ನನಗೆ ಉದರಪೋಷಣೆಯಲ್ಲೇ ಆಶೆ; ಇನ್ನೇನು? ಮುಂದೆ ಕಂಡೇ ಇದೆ!

ರಾಜಂ॥ (ಗಾಬರಿಯಿಂದ) ಏನು?

ವಿದೂ॥ ಇನ್ನೇನು?

ರಾಜಂ॥ ಬೇಗಹೇಳು.

ವಿದೂ॥ ವೆಚ ಕ್ಕೆ ಮಾರ್ಗವು.

ರಾಜಂ॥ ಮಹಾತ್ಮರ ಸೇವೆಗಾಗಿ ಆದಲ್ಲಿ ನಾನು ಕೃತಾರ್ಥನೇ ಸರಿ.

ವಿದೂ॥ ಮಹಾತ್ಮರ ಸೇವೆಗಲ್ಲವು. ನಿನ್ನ ಸೇವೆಗಾಗಿಯೇ.

ರಾಜಂ॥ ಹೇಗಾದರೂ ಒಳಿತೇತಾನೆ? ಚಪಲನೆ. ಬೇಗ ತಿಳುಹಿಸು.

ವಿದೂ॥ ಅಬಬ್ಬ! ಇಷ್ಟು ಕೋಪಿಸಿದರೆ ಬಡವನಾದ ನನ್ನ ಗತಿಯೇನು?

ರಾಜಂ॥ ಆಗಲಿ ಹೇಳು! ನಿನ್ನ ಪರಿಹಾಸವಚನಗಳು ಸಾಕು.

ವಿದೂ॥ ಹಾಗಾದರೆ ಕೇಳಬೇಕು. ಮೇಲೆ ಒಕ್ಕಣೆಯೆಲ್ಲವೂ ಹೇಳಿದುದಾಯಿತಷ್ಟೆ? ಸಾಂಪ್ರತಂ—

ವೃ॥ ಮತ್ಸುತೆ ಸದ್ಗುಣಾನ್ವಿತೆ ಹಿಮಾಂಶುನಿಭಾನನೆ ದೇವಯಾನೆಯಂ।
ವತ್ಸಲನಪ್ಪ ಲೋಕನುತನಪ್ಪ ಧರಿತ್ರಿಯದೇವನಪ್ಪ ನೀ।
ನುತ್ಸವದಿಂದ ಪಾಲಿಸುವೆಯೆಂದು ಕುಡಲ್ ನೆನೆದಿರ್ಪೆನಿಂದು ನೀ।
ನುತ್ಸವದಿಂದೆ ಬಂದು ಮಿಗೆ ಮೋದಮನಿತ್ತಪುದೆಂದು ಬೇಡುವೆಂ॥೮೫॥

ರಾಜಂ *ಮಹಾತ್ಮರಿಂದ ಅನುಗೃಹೀತನಾದೆನು.

ಮಹನೀಯರೆ ಸಪರಿವಾರನಾಗಿ ನಾನು ಇಂದೇ ವೃಷಪರ್ವನ ಪಟ್ಟಣಕ್ಕೆ ಹೊರಟು ಬರುವೆನು. ತಾವು ಮುಂಚಿತವಾಗಿ ದಯಮಾಡಿಸುವುದೊಳ್ಳೆಯದು. ( ವಿದೂಷಕನಂ ನೋಡಿ ) ಎಲೈ ಮೈತ್ರೇಯನೆ, ನೀನೇ ಈ ಮಹನೀಯರನ್ನು ನಮ್ಮ ಅಂತರ್ಗೃಹಕ್ಕೆ ಕರೆದುಕೊಂಡು ಹೋಗಿ ತಕ್ಕ ವಿಧದಿಂದ ಉಪಚರಿಸಿ ಇವರಿಂದ ಅಪೇಕ್ಷಿಸಲ್ಪಡುವ ವಾಹನವನ್ನು ಸಿದ್ಧಪಡಿಸಿ ಮೊದಲೇ ಇವರು ತಮ್ಮ ಸ್ಥಳಕ್ಕೆ ಸೇರುವಂತೆ ಏರ್ಪಡಿಸುವನಾಗು.

ವಿದೂ॥ ಅಪ್ಪಣೆ, ( ಎಂದು ಮುನಿಕುಮಾರರೊಡನೆ ಹೊರಟು ಹೋದನು. )

ರಾಜಂ॥ ಎಲೈ ದೌವಾರಿಕನೆ, ನಮ್ಮ ಮಂತ್ರೀಂದ್ರನಾದ ಸುಮಿತ್ರನಂ ಬರಮಾಡುವನಾಗು,

ದೌವಾರಿಕಂ॥ ಅಪ್ಪಣೆ, ( ಎಂದು ಹೋಗಿ ಮಂತ್ರಿಯೊಡನೆ ಬರುವನು. )

ಮಂತ್ರಿ॥ ( ಪ್ರವೇಶಿಸಿ ) ಮಹಾರಾಜನಿಗೆ ವಿಜಯವಾಗಲಿ,

ರಾಜಂ॥ ಬಾರೈ ಮಂತ್ರೀಂದ್ರನೆ, ನಾವುಗಳು ಇಂದು ಶುಕ್ರಾಚಾರ್ಯರ ಅಪ್ಪಣೆಯಂತೆ ವೃಷಪರ್ವನ ಪಟ್ಟಣಕ್ಕೆ ಹೋಗಬೇಕಾಗಿರುವುದರಿಂದ ವಿವಾಹಕ್ಕೆ ಬೇಕಾದ ಪರಿಕರಂಗಳೊಂದಿಗೆ ಸಮಸ್ತವನ್ನೂ ಸಿದ್ಧಪಡಿಸಿಕೊಂಡು ಪ್ರಯಾಣವನ್ನು ಶುಭ ಮುಹೂರ್ತದಲ್ಲಿ ಬೆಳೆಯಿಸುವನಾಗು,

ಮಂತ್ರಿ॥ ಅಪ್ಪಣೆ, ( ಎಂದೆಲ್ಲರೂ ಹೊರಟು ಹೋದರು )

---

* ರಾಗ ಬೇಹಾಗ್ ರೂಪಕತಾಳ ( ನೀಲವೇಣಿ ಕೋಪಮೇಲನೆ॥ )
ಧನ್ಯನಾದೆ ಮಾನ್ಯನಾದೆನು। ಈ ಜಗದೆ॥ ಪ॥ ಸುಂದರಿಯು। ಳಿಂದ ಸುಖ। ಹೊಂದುವೆನು। ನಂದದಲಿ॥ ಯಿಂದುಮುನಿ। ಇಂದಾಜ್ಞೆಯು। ನೊಂದಿದೆನಾಂ। ಕುಂದಿಲ್ಲದೆ॥ ೧॥ ನೀರಜಾಕ್ಷಿ। ಸಾರಿಮೋದ। ಮೇರೆಗಿಂದು। ಪೂರೈಸಿದಳ್॥ ಸಾರುತ್ತಲಾ। ನಾರಿಯುಳಿ। ಹಾರಿಸುವೆಂ। ಮಾರತಾಪಂ॥ ೨॥

( ಬ್ರಾಹ್ಮಣರ ಪ್ರವೇಶಂ )

೧ನೇಯವನು॥ ಎಲೈ ಮಾಧವನೆ! ಎಲ್ಲಿಗೆ ಹೊರಟಿರುವೆ? ಶುಕ್ರಾಚಾರ್ಯರ ಮನೆಯಲ್ಲಿ ಅವರ ಮಗಳಾದ ದೇವಯಾನೆಯ ವಿವಾಹದ ಸಂಗತಿ ನಿನಗೆ ತಿಳಿಯದೋ ?

೨ನೇಯ॥ ಇನ್ನೂ ಇಲ್ಲವು. ಆಕೆಯನ್ನಾರಿಗೆ ಕೊಡುವುದು?

೧ನೇಯ॥ ಸಾರ್ವಭೌಮನಾದ ಆ ಯಯಾತಿ ಮಹೀಪತಿಗೆ.

೨ನೇಯ॥ ಏನು ? ಕ್ಷತ್ರಿಯನಿಗೆ?

೧ನೇಯ॥ ಅಹುದಯ್ಯಾ. ಆ ಕಚನಿಂದ ಆಕೆಗೆ ಶಾಪವು ಬಂದಿರಲಿಲ್ಲವೆ? ಬ್ರಾಹ್ಮಣ ವಚನವು ನಿರರ್ಥಕವಾದೀತೇ?

೨ನೇಯ॥ ಉಂಟೇ? ಆದರೂ ಆಕೆಗೆ ಅನುರೂಪನಾದ ವರನೇ ದೊರೆತನು. ಇನ್ನೇನು? ನಮ್ಮ ಆನಂದಕ್ಕೆ ಪಾರವೇ ಇಲ್ಲವು.

೩ನೇಯ॥ ( ಪ್ರವೇಶಿಸಿ ) ಏನಿರಯ್ಯ! ಈದಿನ ಶುಕ್ರಾಚಾರ್ಯರ ಮನೆಯಲ್ಲಿ ವಿವಾಹ ಪ್ರಸ್ತುತವಂತೆ? ಬ್ರಾಹ್ಮಣರಿಗೆಲ್ಲಾ ಲಾಡು, ಮಂಡಿಗೆ, ಚಿರೋಟಿ ಮೊದಲಾದ ಭಕ್ಷ್ಯಗಳನ್ನು ಮಾಡಿಸುತ್ತಾರಂತೆ?

೪ನೇಯ॥ ( ಪ್ರವೇಶಿಸಿ ) ಇವನಾವಾಗಲೂ ಲಾಡು ಮಂಡಿಗೆ ಎನ್ನುತ್ತಲೇ ಇರುತ್ತಾನಪ್ಪ. ಅದೇನು? ನಿತ್ಯವೂ ಇರುವದೇನೋ? ಎಂದಾದರೂ ಇಂತಹ ಮಹಾರಾಜರು ಶ್ರೀಮಂತರು ಸಂತರ್ಪಣೆ ಮಾಡಿಸಿದಾಗತಾನೆ? ಅದಕ್ಕೇತಕ್ಕೆ ಆಶಿಸಬೇಕು? ನಮಗೆ ಆವಾಗಲೂ ಶಾಶ್ವಿತವಾಗಿರುವುದನ್ನು ಬಿಟ್ಟು;

೩ನೇಯ॥ ನಿನಗಾವುದೋ ಶಾಶ್ವಿತ? ರಾಗಿ ಹಿಟ್ಟಿನ ಮುದ್ದೆಯೋ? ಅದೇ ನಿನಗೆ ಲಾಡು.

೪ನೇಯ॥ ಅಹುದಯ್ಯ. ಆ ಲಾಡನ್ನು ಒಬ್ಬರ ಹಂಗಿಗೆ ಬೀಳದಂತೆ ಸ್ವತಂತ್ರವಾಗಿ ತಿನ್ನುವಂತೆ ದೇವರು ಆರಿಗೆ ಅನುಗ್ರಹಿಸಿದರೆ ಅವನೇ ಧನ್ಯನು. ಅವನೇ ಶ್ರೀಮಂತನು. ಅವನೇ ರಾಜನು. ನೋಡು, ಅದನ್ನು ಕಷ್ಟಾರ್ಜಿತವಾಗಿಸಿಕೊಂಡು ಸ್ವತಂತ್ರವಾಗೆ ತಿನ್ನಲಾರದೆ ನಾಚಿಕೆಯನ್ನೂ ಧೈರ್ಯವನ್ನೂ ಬಿಟ್ಟು ಧನ ಮತ್ತು ಅಧಿಕಾರ ಮದಾಂಧರನ್ನು ಆಶ್ರಯಿಸುವರೆಷ್ಟುಜನ? ಅನ್ಯರನ್ನು ಹಿಂಸಿಸಿ ಮೋಸಪಡಿಸಿ ಸಂಪಾದಿಸಿ ತಿನ್ನುವವರೆಷ್ಟುಜನ? ಹೇಳಬಾರದ ಪಾಪಕೃತ್ಯಗಳನ್ನು ಮಾಡಿ ಆರ್ಜಿಸತಕ್ಕವರೆಷ್ಟುಜನ? ತಿನ್ನುವುದಕ್ಕೆ ಗತಿಯಿಲ್ಲದೆ ಕೆಲಸ ಮಾಡದೆ ಸೋಮಾರಿಗಳಾಗಿದ್ದು ಉಪವಾಸವಿದ್ದು ಸಂಕಟವನ್ನನುಭವಿಸುವವರೆಷ್ಟುಜನ? ಹೇಗಾದರೂ ಅನ್ಯರನ್ನಾಶ್ರಯಿಸಿಯೂ ಪಾಪಕೃತ್ಯಗಳಿಂದ ಸಂಪಾದಿಸಿಯೂ,

ಲಾಡು ಮಂಡಿಗೆಗಳನ್ನು ತಿನ್ನುವುದಕ್ಕೆ ಆಶಿಸುವದಕ್ಕಿಂತಲೂ ಕಷ್ಟಾರ್ಜಿತವಾಗಿ ಉತ್ತಮ ಧರ್ಮದಲ್ಲಿ ಸಂಪಾದಿಸಿದ ರಾಗಿ ಹಿಟ್ಟಿನ ಮುದ್ದೆಯನ್ನು ತಿನ್ನುವಿಕೆಯೇ ಒಳ್ಳೇಯದಲ್ಲವೆ?

೩ನೇಯ॥ ಅಹುದಪ್ಪ. ನೀನು ವೇದಾಂತಿ. ನಿನಗೆ ಈ ಪ್ರಪಂಚದ ನಡೆವಳಿಯೇ ತಪ್ಪು.

೪ನೇಯ॥ ಅವುದು ತಪ್ಪೋ ಅದೇ ತಪ್ಪಾಗುವುದು. ತಪ್ಪನ್ನಾರೊಪ್ಪುವರು?

೩ನೇಯ॥ ನಿನ್ನನ್ನು ಕೆಣಕಿದುದೇ ನನ್ನ ತಪ್ಪು. ಸಾಕಪ್ಪ. ಇನ್ನು ಸುಮ್ಮನಿರು. ಕೆಲಸವಿಲ್ಲದಾಗ ಈ ಕಾಡು ಹರಟೆಗೆ ಕುಳಿತುಕೊಳ್ಳೋಣ. ಈಗ ಸಂಪಾದನೆಯ ಕಾಲ. ಇನ್ನು ನಿಮ್ಮಲ್ಲಿ ಮಾತಿಗೆ ಕುಳಿತರೆ ಮಿತಿಯೇ ಇಲ್ಲವು. (ಎಂದು ಮತ್ತೊಬ್ಬನಕಡೆ ತಿರುಗಿ) ಏನಯ್ಯಾ? ಶ್ರೀಕಂಠಭಟ್ಟ. ನೀನು ಮಹಾರಾಜರಕಡೆಯ ಪುರೋಹಿತನಾಗಿದ್ದೀಯೋ?

೫ನೇಯ॥ ಅವರಕಡೆಯುವರು ಬೇರೆ ಬರುತ್ತಾರೆ. ಆದರೆ ಆ ಪುರೋಹಿತರು ನಮ್ಮ ಬಂಧುಗಳು.

೩ನೇಯ॥ ಅವರಕಡೆ ಪುರೋಹಿತರು:—(ಎಂದು ಆಲೋಚಿಸಿ) ಅವರ ಹೆಸರು ಗುಂಡಭಟ್ಟರಲ್ಲವೇ?

೫ನೇಯ॥ ಅಲ್ಲ. ಅವರ ಹೆಸರು ಬೇರೆ ಇದೆ. ಆದರೆ ಈ ಹೆಸರು ಅವರಿಗೆ ಅನ್ವರ್ಥನಾಮವಾಗಿ ವ್ಯವಹಾರದಲ್ಲಿದೆ.

೩ನೇಯ॥ ಅವರು ನಿನಗೇನಾಗಬೇಕು?

೫ನೇಯ॥ ಅವರ ಚಿಕ್ಕ ತಾಯಿ ಅತ್ತೆಯ ಅತ್ತೆಯ ಅತ್ತಿಗೆ ಚಿಗಪ್ಪನವರು ನನ್ನ ತಂಗಿ ಅತ್ತಿಗೆಯ ಭಾಹನವರ ಭಾವಂದಿರು.

೩ನೇಯ॥ ಸರಿ. ಹಾಗಾದರೆ ಸಮೀಪ ಬಂಧುಗಳೇ? ನಿನಗೆ ಒಳ್ಳೆಯ ಸಂಪಾದನೆ ಇದೆ. ದಕ್ಷಿಣೆಗಳನ್ನು ಕೊಡುವಾಗ ನನ್ನನ್ನು ಮರೆಯಬೇಡಪ್ಪ. ನಾನು ಬಡವ! ನನ್ನ ಸಂಗತಿ ನಿಮಗೆ ಗೊತ್ತಿರುವುದಷ್ಟೆ?

(ತೆರೆಯಲ್ಲಿ) ಎಲೊ ಎಲೋ ಚಾರರೇ, ಯಯಾತಿ ಮಹೀಪತಿ ಸರ್ವ ಸನ್ನಾಹದೊಡನೆ ಊರಹೊರಗಣ ಉದ್ಯಾನವನ ಪ್ರಾಂತದೆಡೆಗೆ ಬಂದಿರುವನು. ಎಲ್ಲರೂ ನಿಮ್ಮ ನಿಮ್ಮ ಕಾರ್ಯಗಳಲ್ಲಿ ಸಿದ್ಧರಾಗಿರಿ. (ಎಂಬುದನ್ನು ಕೇಳಿ)

೩ನೇಯ॥ ಏನು? ಬೀಗರು ಬಂದಂರಂತೆ. ನಾವೂ ಎದಿರುಗೊಳ್ಳುವಾಗ್ಗೆ ಹೋಗೋಣ. ಆಗಿನ ದಕ್ಷಿಣೆ ತಾಂಬೂಲಗಳನ್ನು ಏಕೆ ಬಿಡಬೇಕು?

೫ನೇಯ॥ ಅಹುದು. (ಎಂದು ಹೊರಟು ಹೋದರು.)

( ತೆರೆಯಲ್ಲಿ ) ಮಹಾತ್ಮರೇ! ವಿವಾಹಲಗ್ನವು ಸನ್ನಿಹಿತವಾಯ್ತು. ಆದಿಯಲ್ಲಿ ಮಂಗಳದೇವತಾಧೀಶನಾದ ಶ್ರೀನಿವಾಸನಂ ಕುರಿತು ಮಂಗಳವನ್ನು ಹಾಡೋಣ.

ಕಂ॥ ಜಯ ಜಯ ಕಮಲಾರಮಣಾ ।
ಜಯ ಜಯ ದೇವೇಶವಿನುತ ಸರಸಿಜಚರಣಾ ॥
ಜಯ ಜಯ ದೀನೋದ್ಧರಣಾ ।
ಜಯ ಜಯ ಅಲಕಸುಪುರೀಶ ಕರುಣಾಭರಣಾ ॥ ೮೬ ॥

ಚತುರ್ಥಾಂಕಂ ಮುಗಿದುದು.

ಶ್ರೀರಾಮಂ

111269

## ಪಂಚಮಾಂಕಂ.



( ನಾರದರ ಪ್ರವೇಶಂ )

* ವೃ॥ ಹರಿಮುಕುಂದ ನಾರಾಯಣಾಚ್ಯುತಾ ಹರಿಹಯೇಶಧಾತ್ರಾದಿವಂದಿತಾ ।
ಹರಿಗೃಹಾಂಬುಜಾತೋದರಾಮುರಾಶರಹರಾಮರಾಧೀಶವಾವರಾ ॥
ದುರಿತದೂರ ಚಾರಿತ್ರಕೇಶವಾವರನತಾಳಿ ಚಿತ್ತಾಬ್ಜವಲ್ಲವಾ ।
ಪರಮಪೂರುಷಾ ಮುಕ್ತಿದಾಯಕಾ ವೃಜಿನನಾಶಕಾ ಲೋಕನಾಯಕಾ

ಓಂ, ಹರಿ. ಮುಕುಂದ ನರಾಯಣ! ( ಎಂದು ಸುತ್ತಲೂ ನೋಡಿ, ) ಇದೇನು? ಯಯಾತಿ ಭೂಮಿಪತಿಯಾಳ್ವಜನಪದವಾಗಿರುವುದು? ಈತನ ಪಟ್ಟಣಕ್ಕೆ ಹೋಗಬೇಕಾಗಿರುವ ಕೆಲಸವೇನಿರುವುದು? ನಮ್ಮ ಪೂಜ್ಯನಾದ ಪಿತಾಮಹನಿಂದ ಆ ಸಭೆಗೆ ಬರುವಂತೆ ಆಜ್ಞಪ್ತನಾಗಿರುವೆನಲ್ಲವೆ? ಆದಕ್ಕಾಗಿ ಹೊರಟಿರುವೆನು. ( ಏನನ್ನೋ ಸ್ಮರಿಸಿದಂತೆ ನಟಿಸಿ ) ಓಹೋ, ಚೆನ್ನಾಯಿತು ಚೆನ್ನಾಯಿತು! ನನಗೆ ಇಲ್ಲಿಯೂ ಒಂದು ಕೆಲಸವಿದ್ದೇ ಇರುವುದು. ನನಗೆ ಕೆಲಸವಿಲ್ಲದೆಡೆಯಾವುದು?

---

* ರಾಗ ಚಕ್ರವಾಗ ರೂಪಕತಾಳೆ ( ನಾಮನವಿನಿವಿನವಯ್ಯಾ, ನಾಗರಾಜಶ ) ನಾರಾಯಣ ನಾರಾಯಣ । ನಾರದಾಗಮವಿನುತ ಚರಣ ॥ ಘೋರಾಶರ ಕುಲಹನನ । ಶ್ರೀರಮಣ ಕೃಪಾಭರಣ ॥ ಪ ॥ ಜಲಜೋದರ ಖರಹರ । ಕಲಧೌತಾಂಬರಧರ ॥ ಸುಲಲಿತಚಾರಿತ್ರನತಹೃ । ನ್ನಿಲಯಪರಿಪಾಹಿಹರಿ ॥೧॥ ತಾಪಸ ಚಿತ್ತಾಬ ಹಂಸ । ಆಪಜ್ಜನಪಾಲಹಂಸ ॥ ಕೋಪ ಮುಳಿದೆನ್ನಬೇಗ! ಕಾಪಾಡುದೇವದೇವ ॥ ೨ ॥


AKSHARA GRANTHALAYA

ಆಗಲಿ. ಪ್ರಕೃತದಲ್ಲಿ ದೇವಯಾನೆಯ ಸೇವೆಗಾಗಿ ವೃಷಪರ್ವನಿಂದ ಕೊಡಲ್ಪಟ್ಟ ಆತನ ಸುತೆಯಾದ ಶರ್ಮಿಷ್ಠೆಯೆಂಬವಳಲ್ಲಿ ಈ ಯಯಾತಿ ಅತಿ ಪ್ರೀತಿಯಿಂದಿದ್ದು. "ದುಹ್ಯ-ನನು-ಪೂರವ" ರೆಂಬ ಮೂವರು ಮಕ್ಕಳನ್ನು ಪಡೆದು ಇರುವನು. ಈ ದೇವಯಾನೆಗೂ "ಯದು, ದುರ್ವಸು" ಎಂಬ ಇಬ್ಬರು ಮಕ್ಕಳಿರುವರು. ಈಗ ಈ ಇಬ್ಬರು ಸವತಿಯರ ಸುತರುಗಳಿಗೆ ವ್ಯಾಜ್ಯವನ್ನು ತಂದಿಡಲೇ? ಸವತಿಯರಿಗೆ ತಂದಿಡಲೇ? (ಯೋಚಿಸಿ) ಆಗಲಿ. ಈ ಕೆಲಸಗಳನ್ನು ಆಮೇಲೆ ಮಾಡೋಣ. ಇದುವರೆಗೆ ಶರ್ಮಿಷ್ಠೆಯಲ್ಲಿ ತನ್ನಪತಿ ಅನುರಕ್ತನಾಗಿರುವನೆಂಬುದೂ, ಆಕೆಗೆ ಮಕ್ಕಳಾಗಿರುವುದೂ ದೇವಯಾನೆಗೆ ತಿಳಿಯದೆ ಇರುವುದರಿಂದ ಈ ವಿಷಯವನ್ನು ಆಕೆಗೆ ತಿಳಿಸಿ ಗಂಡ ಹೆಂಡರಿಗೆ ಮನಃಖೇದವನ್ನು ಉಂಟುಮಾಡುವುದು ಸಜ್ಜನರ ಸ್ವಭಾವವಲ್ಲವು. ನಾನು ಸುಳ್ಳನ್ನು ಹೇಳಿದರೆ ಆ ತಪ್ಪು ನನ್ನದಾಗುವುದು. ನಿಜವಾದುದನ್ನು ತಿಳಿಸಿದರೆ ನನ್ನದೇನು? ಒಂದುವೇಳೆ ನಿಜವಾದುದನ್ನು ಹೆಳಿದರೂ ಕೆಡುಕಾಗಬಹುದು. ಅದಕ್ಕೆ ನಾನೇನು ಮಾಡಲಿ? ಸತ್ಯವಾಗಿ ಹೇಳುವುದೇ ನನ್ನ ಕರ್ತವ್ಯವು. (ಆಲೋಚಿಸಿ) ಇದರಿಂದ ಮಹತ್ತರವಾದ ಕೆಡುಕಾದೀತೆ? ಆಗದಂತೆ ನೋಡಿಕೊಳ್ಳುವೆನು. ಹೇಗಾಗುವುದೋ ನೋಡೋಣ. (ಮುಂದೆ ನೋಡಿ) ಎಲಾ ವೇತ್ರವತಿ ನೀನಾರಲ್ಲಿರತಕ್ಕವಳು? (ಕಿವಿಗೊಟ್ಟು ಕೇಳಿ) ಏನು? ದೇವಯಾನೆಯ ಅಂತಃಪುರ ಪರಿಚಾರಿಣಿಯೋ? ಆಕೆ ಈಗ ಏನು ಮಾಡುತ್ತಿರುವಳು? (ಕೇಳಿದಂತೆ ನಟಿಸಿ) ಹಾಗಾದರೆ ಮಕ್ಕಳನ್ನು ಮುದ್ದಿಸುತ್ತಾ ಅತಿ ಸಂತೋಷದಿಂದಿರುವಾಕೆಗೆ ಈ ವೃತ್ತಾಂತವನ್ನು ಕಿವಿಯಲ್ಲಿ ಬೀಳಿಸುವೆನು. (ಎಂದು ಹೊರಟು ಹೋದನು.)

(ದೇವಯಾನೆ ಮಕ್ಕಳೊಡನಿರುವಳು.)

ದೇವಯಾ॥ ಎಲೈ! ಯದುಕುಮಾರನೇ! ಆವಾವ ವಿದ್ಯೆಯನ್ನು ಕಲಿತಿರುವೆ? ಹೇಳು?

ಯದು॥ * ಕಂ॥ ಕಲಿತಿರ್ಪೆನಕ್ಷರಜ್ಞಾ।
ನ ಲಿಖಿತ ಗಣಿತಂಗಳಂ ಪುರಾಣಾದಿಗಳಂ॥
ಸಲೆವೇದನೀತಿ ಕಾವ್ಯಂ।
ಗಳನೆಲ್ಲಂಗುರುಗಳಿಂದೆ ನಿಮ್ಮಯ ದಯೆಯಿಂ॥ ೮೮॥

---

* ರಾಗ ಕಮಾಚ್. ಆದಿತಾಳ (ಗಂಗಾಧರನೆ ಫಣಲಿಂಗನಿಮಗೊಂದಿಪೆಜಯಜಯ) ಮಾತೆ ಕೇಳ್ನಿನ್ನಯ। ಮಾತಿನ ಮೇರೆಗೆ ಕಲಿತೆಂ॥ ಪ॥ ಗುರುಗಳ ಸೇವಿಸು। ತುರು ಭಕ್ತಿಯಿಂ ಸದ್ಭಾವ್ಯ॥ ಕರಣಲಿಖಿತಾ। ಕ್ಷರಗಣಿತಂಗಳ್ ಭರದಿಂ॥೧॥ ನೀತಿಧರ್ಮಯೋಗ। ಜ್ಯೋತಿಷ ಮಂತ್ರಗಳ್ ಮೇಣ್। ಕೌತುಕ ವಾದೋಚ್ಚಾಟ। ನೇತಿಹಾಸಂಗಳ್ ಪ್ರಶ್ನೆಗಳ್॥ ೨॥

ದೇವ॥ ಪುತ್ರನೆ, ಆನಂದದಾಯಕನಾಗಿರುವೆ. ನಿನಗೆ ಅತ್ಯವಶ್ಯಕವಾಗಿ ಬೇಕಾಬೇಕಾಗಿರುವ ಸಂಗ್ರಾಮಲಕ್ಷಣವನ್ನು ಕಲಿತಿರುವೆಯಾ?

ಯದು॥ ಅದನ್ನೇ ಈಗ ನಾನು ಕಲಿಯುತ್ತಿರುವುದು.

ದೇವ॥ ಅದಕ್ಕೆ ಈಗ ನಿನಗೆ ಸರಿಯಾದ ಕಾಲವಾಗಿರುವುದು. ( ಮತ್ತೊಬ್ಬನಕಡೆ ತಿರುಗಿ ) ಮುದ್ದುಮಗನೆ, ದುರ್ವಸು, ನೀನು ಕಲಿತಿರುವುದೇನು?

ದುರ್ವಸು॥ ತಾಯಿ! ಲಾಲಿಸಬೇಕು. ( ಎಂಬಷ್ಟರಲ್ಲಿ )

ವೇತ್ರವತಿ॥ ( ಪ್ರವೇಶಿಸಿ ) ಮಹಾದೇವಿ, ಸುರಮಹರ್ಷಿಗಳಾದ ನಾರದರು ನಿಮ್ಮನ್ನು ಕಾಣಲೋಸುಗ ದಯೆಮಾಡುತ್ತಿರುವರು.

ದೇವ॥ ಎಲ್ಲಿರುವರು?

ವೇತ್ರ॥ ದ್ವಾರಸ್ಥರಾದರು.

ದೇವ॥ ಮಹರ್ಷಿಗಳನ್ನು ತಕ್ಕ ಉಪಚಾರದಿಂದೊಡಗೊಂಡು ಬರುವಳಾಗು. ನಾನು ಕೂಡತಕ್ಕ ರೀತಿಯಲ್ಲಿರುವೆನು.

ವೇತ್ರ॥ ಅಪ್ಪಣೆ ( ಎಂದು ಹೋಗಿ ನಾರದರೊಡನೆ ಬರುವಳು. )

ನಾರದರು ॥ವೃ॥ ನಾರಾಯಣಾಚ್ಯುತಹರೇ ಪರಮೇಶ ಕೃಷ್ಣ ।
ಘೋರಾಶರಾರಿ ಜಗದೀಶಭವಾಗಕೃಷ್ಣ ॥
ಸಾರಾಗಮಸ್ತುತ ಜಗಚ್ಛುಭಭೂಜ ಕೃಷ್ಣ ।
ನೀರೇಜಗರ್ಭವರವಾಂ ಪರಿಪಾಹಿ ಕೃಷ್ಣ ॥ ೪೯ ॥

ದೇವ॥ ( ಮೇಲಕ್ಕೆದ್ದು ) ಮಹಾತ್ಮರಿಗೆ ನಮಸ್ಕರಿಸುವೆನು.

ನಾರ॥ ದೀರ್ಘಸುಮಂಗಲೀಭವ.

ದೇವ॥ ಮಹಾತ್ಮರು ಈ ಪೀಠವನ್ನಲಂಕರಿಸಬೇಕು.

ನಾರ॥ ತಥಾಸ್ತು.

ದೇವ॥ ತಾವು ದಯೆಮಾಡಿಸಿದ ಕಾರಣವನ್ನು ನಿರೂಪಿಸಿದಲ್ಲಿ ಕೃತಜ್ಞಳಾಗಿರುವೆನು.

ನಾರ॥ ಮಗಳೆ, ದೇಶವನ್ನು ಸಂಚರಿಸುತ್ತಾ ಹೀಗೆಯೇ ಬಂದು ನಿನ್ನ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಗೋಣವೆಂದು ಇಲ್ಲಿಗೆ ಬಂದೆನು.

ಕಂ॥ ವರನಪ್ಪಣೆಯಂ ಮೀರದೆ ।
ಚರಿಸುತ್ತಂ ದಾಸಿಯರ್ಕಳಂ ಹಿತದಿಂ ನೀಂ ॥
ಪೊರೆಯುತೆ ಗುರುಗಳ ಪಿರಿಯರ ।
ನುರುತರದಿಂ ಪೂಜಿಸುತ್ತುಮಿರ್ಪೆಯ ಮಗಳೇ ॥ ೫೦ ॥

ದೇವ॥ ಮಹಾತ್ಮರುಗಳ ಅಪ್ಪಣೆಯಂತೆ ಪತಿವ್ರತೆಯರ ಧರ್ಮವನ್ನನುಸರಿಸುತ್ತಿರುವೆನು. ಮತ್ತೇನು? (ಎನ್ನುವ ಹೊತ್ತಿಗೆ ಹೊರಗೆ ಅಳುವ ಶಬ್ದವನ್ನು ಕೇಳಿ) ಎಲಾ ವೇತ್ರವತಿ! ಅದಾರು? ಹೊರಗೆ ಅಳುತ್ತಿರುವರು? ಆಚೆಗೆ ಕಳುಹಿಸು. ( ಮನಸ್ಸಿನಲ್ಲಿ ) ಏಕೆ? ಹೀಗೆ ಅಪಶಕುನವುಟಾಗುವುದು? ಭಯವೂ ಅಂಕುರಿಸಿತಲ್ಲಾ? ಕಾರಣವೇನಿರಬಹುದು? ( ಪ್ರಕಾಶಂ ) ಮಹಾತ್ಮರೆ, ಮತ್ತೇನು ವಿಶೇಷವಾರ್ತೆ?

ನಾರ॥ ಮತ್ತೇನು ವಿಶೇಷವಾರ್ತೆ? ಸನ್ಮತಿಯುತಳೆ, ನಿನ್ನ ಸವತಿಯು ಕ್ಷೇಮದಿಂದಿರುವಳೋ?

ದೇವ॥ ( ಭಯವನ್ನು ಸೂಚಿಸಿ ಗದ್ಗದಸ್ವರದಿಂದ ) ಹ! ನನ್ನ ಸವತಿಯಾರು?

ನಾರ॥ ನಿನ್ನ ಸವತಿಯೇ ನಿನಗೆ ಗೊತ್ತಿಲ್ಲವೇ?

ದೇವ॥ ( ಮನಸಿನಲ್ಲಿ ) ಎಲೆ ಚಿತ್ತವೆ, ಇದೇನಿಷ್ಟು ಭವಾಕ್ರಾಂತಯಾಗಿರುವೆ? ನಿಜವನ್ನು ತಿಳಿಯುವವರೆಗೂ ತಾಳು. ( ಪ್ರಕಾಶಂ ) ಇದುವರೆಗೆ ನಿನಗೆ ತಿಳಿಯದು.

ನಾರ॥ ಹಾಗಾದರೆ ಆ ಸುದ್ದಿಯನ್ನು ಬಿಡು. ಮಹಾತ್ಮರ ಮಗಳೆ, ನಿನ್ನ ವಿಷಯದಲ್ಲಿ ನಿನ್ನ ಪತಿ ವಿಶ್ವಾಸವುಳ್ಳವನಾಗಿರುವನೋ?

ದೇವ ॥ಕಂ॥ ದಾವಾನಲ ನಟವಿಯನ್ನೈ।
ದೋವದೆ ಭಕ್ಷಿಸುವ ತೆರದೊಳೆನ್ನಯಮನಮಂ ॥
ದೇವರೆ ಸವತಿಯ ಪೆಸರೇ।
ಸಾವನಿತೆಸಗಿದುದು ಪೇಳಿಮೆನ್ನೊಳ್ದಯೆಯಿಂ ॥ ೯೧ ॥

ನಾರ॥ ನಾನೇನನ್ನು ಹೇಳಬೇಕು?

ದೇವ॥ ತಾವು ನನ್ನ ಸವತಿಯೆಂದಾರನ್ನು ಎಂದುದು? ಅಂತಹವಳಾವಳು?

ನಾರ॥ ನಾನು ಅದನ್ನೆಲ್ಲವನ್ನೂ ಹುಡುಕಿಕೊಂಡು ಏತಕ್ಕೆ ತಿರುಗಲಿ? ಎಂದೋ ನಾನು ಈ ದಾರಿಯಲ್ಲಿ ಪ್ರಯಾಣ ಮಾಡುತ್ತಿರುವಾಗ ಮೂವರು ರಾಜಕುಮಾರರು ಸರೋವರದ ಬಳಿಯಣ ಉದ್ಯಾನವನದಲ್ಲಿ ವಿಹರಿಸುತ್ತಿದ್ದರು. ಇವರಾರೆಂದು ವಿಚಾರಿಸಲು ಯಯಾತಿ ಮಹೀಪತಿಯ ಸುತರೆಂದು ತಿಳಿಯಿತು.

ದೇವ॥ ಅವರಲ್ಲಿ ಈ ಇಬ್ಬರೂ ಇದ್ದರೋ?

ನಾರ॥ ( ಅವರನ್ನು ನೋಡಿ ) ಇವರ ಹೆಸರೇನು?

ದೇವ|| ಯದು, ದುಶ್ವಸು;

ನಾರ|| ಹಾಗಾದರೆ ಇವರಿರಲಿಲ್ಲವು. ದುಹ್ಯ-ನನು-ಪೂರವ ಎಂಬಿವು ಅವರ ಹೆಸರುಗಳು. ಅವರೂ ಇವರ ಸಮಸ್ವರೂಪರೇ ಆಗಿದ್ದರು.

ದೇವ|| ಅವರಾರ ಮಕ್ಕಳೆಂದು ತಾವು ವಿಚಾರಿಸಿದಿರಾ?

ನಾರ|| ನಾನು ಕೇಳಿದೆನು. ಯಯಾತಿಯ ಸುತರೆಂದು ತಿಳಿಸಿದರು. ಅವರಲ್ಲಿ ಕೊನೆಯವನಾದ ಪೂರವನೆಂಬವನು ಚಕ್ರವರ್ತಿ ಲಕ್ಷಣಗಳುಳ್ಳವನಾಗಿದ್ದನು. ಅವನೇ ಮುಂದಣ ಚಕ್ರವರ್ತಿಯಾಗುವನು.

ದೇವ|| ಅವಳ ಮಕ್ಕಳೆಂಬುವದನ್ನು ಕೇಳಿದಿರಾ? ಅಷ್ಟೆಲ್ಲಾ ನೀವೇಕೆ ಕೇಳುವಿರಾ.

ನಾರ|| ಅದನ್ನೂ ಕೇಳಿದೆನು.

ದೇವ|| ( ಮನಸ್ಸಿನಲ್ಲಿ ) ಈಗ ಸಂದೇಹವು ನಿವೃತ್ತಿಯಾಗುವುದು.

( ಪ್ರಕಾಶಂ ) ಹಾಗಾದರೆ ನನಗೆ ಸಂತಾಪದಾಯಕಳಾರು?

ನಾರ|| ನಿನಗೆ ಸಂತಾಪವೇಕೆ? ಪತಿಶಿಶ್ರೂಷೆಯನ್ನು ಒಬ್ಬಳು ಮಾಡುವುದಕ್ಕಿಂತಲೂ ಇಬ್ಬರಿಗೆ ಸುಲಭವಾಗಿರುವದಲ್ಲವೆ?

ದೇವ|| ಮಹಾತ್ಮರೆ, ತಾವು ಕೋಪಿಸಕೂಡದು. ತಾವು ಆಜನ್ಮಬ್ರಹ್ಮಚಾರಿಗಳಲ್ಲವೆ? ಗೃಹಸ್ಥಾಶ್ರಮದ ಸುಖಕಷ್ಟಂಗಳು ತಮಗೆ ಹೇಗೆ ಗೊತ್ತಾಗುವವು?

ನಾರ|| ನಿಜವಾದ ಮಾತೇ ಸರಿ.

ದೇವ|| ದಯೆಯಿಟ್ಟು ಅಪ್ಪಣೆ ಕೊಡಿಸಿರಿ. ಆಕೆ ಯಾರು?

ನಾರ|| ಎಲ್ಲಿರುವಳು? ( ಎಂದು ಸುತ್ತಲೂ ನೋಡುವನು ).

ದೇವ|| ಮಹಾತ್ಮರೆ, ಈ ಹಾಸ್ಯವನ್ನು ಸಾಕು ಮಾಡಿ ನಿಜವನ್ನು ಅರುಹಬೇಕು.

ನಾರ||ಹಾಗಾದರೆ ನಾನೆಂದಾದರೂ ಸುಳ್ಳನ್ನು ಹೇಳತಕ್ಕವನೋ ?

ದೇವ|| ಸಜ್ಜನರಲ್ಲಿ ಅಂತಹ ದೋಷವನ್ನಾರೋಪಿಸಲಾದೀತೆ? ದಯೆಯಿಟ್ಟು ಬೇಗ ಸೂಚಿಸಿರಿ. ನನ್ನುದರದಲ್ಲೇನೋ ಒಂದು ವಿಧವಾದ ಬಾಧೆಯಾಗುತ್ತಿರುವದು.

ನಾರ|| ಆ ಬಾಲಕರು ನಾವು ಶರ್ಮಿಷ್ಠೆಯ ಹೊಟ್ಟೆಯಲ್ಲಿ ಹುಟ್ಟಿದವರೆಂದರು.

ದೇವ|| ಹಾ ಹಾ! ಕೆಟ್ಟೆನು. ( ಎಂದು ಮೂರ್ಛೆಬಿದ್ದು ಕೋಪದಿಂದ )

ಕಂ || ಆ ನೀಚಕಳನಾಕೆಯಪಿತ |
ನಾನಿಸಿದಂ ದಾಸಿಯಾಗಲೆನ್ನಯ ಬಳಿಯೊಳ್ ||
ಭೂನಾಥನವಳನಾಳಲ್ |
ಮಾನವೆ? ಮನ್ಮನದೆ ತಾಪಮುರೆ ಪೆರ್ಚುವುದೈ || ೯೨ ||

ಹಾ ಹಾ!! ರಾಕ್ಷಸಿಯೆ! ಕಾಮರೂಪಿಣಿಯೆ! ನನ್ನೋಪನನ್ನು ವಶಮಾಡಿಕೊಂಡೆಯಾ? ಹಾ ಹಾ!! ಆಗಲಿ! ಇದಕ್ಕೆ ತಕ್ಕ ಶಿಕ್ಷೆಯನ್ನು ಮಾಡುವೆನು.

ನಾಗ॥ ಅಯ್ಯೋ! ಹುಚಳೆ! ಆಕೆಯಷ್ಟಕ್ಕೆ ಆಕೆ ಇದ್ದರೆ ನಿನಗೇಕಿಷ್ಟು ಸಂಕಟ? ಸ್ವಸ್ಥಚಿತ್ತಳಾಗು. ಸ್ತ್ರೀಯರ ಸ್ವಭಾವವೇ ಹೀಗೆ (ಮನಸ್ಸಿನಲ್ಲಿ) ಹು! ನಾನು ಬಂದು ಬಹಳ ಹೊತ್ತಾಯಿತು. ಬಂದಕಾರ್ಯವೂ ಕೈಗೂಡಿತು. (ಪ್ರಕಾಶಂ) ನಾನಿನ್ನು ಹೊರಡುವೆನು. (ಎಂದು ಹೊರಟು ಹೋದನು.)

ದೇವ॥ ಈಗ ಏನನ್ನು ತಾನೆ ಮಾಡಲಿ?

* ವೃ॥ಉರಗಂ ಕರ್ಚಲುಮಂತೆ ತೇಳ್ಕಡಿದೊಡಂ ವ್ಯಾಘ್ರಾದಿದುಷ್ಪ್ರಾಣಿಗಳ್।
ಭರದಿಂದಾರ್ಭಟಿಸಲ್ ಧನಂಜಯನನಂಟಿಲ್ ನಂಜನುಣ್ಣಲ್ವಲಂ ॥
ಉರುಕಷ್ಟಂಗಳನುಂಟುಮಾಳ್ಕುಮದರಿಂಬೈತಿಟ್ಟುಕೊಂಡಿರ್ದೊಡಂ।
ಮರಣಾವಸ್ಥೆಯನುಂಟುಮಾಳ್ಪದಕಟಾಕೇಳಲ್ಸಪತ್ನೀಜನಂ॥೯೨॥

ಇನ್ನೀ ಪರಿತಾಪವನ್ನು ಹೇಗೆ ಸಹಿಸಲಿ? ಹಾ! ಆಗಲಿ ಈಗಲೇ ನನ್ನ ಪಿತನ ಬಳಿಗೆ ಹೋಗಿ ಈ ವಾರ್ತೆಯನ್ನರುಹಿ ಈ ನೀಚಳಿಗೂ ರಾಜನಿಗೂ ತಕ್ಕ ಶಿಕ್ಷೆಯನ್ನು ಮಾಡಿಸುವೆನು. (ಎಂದು ಹೊರಟುಹೋದಳು.)

(ಬಳಿಕ ಶುಕ್ರಾಚಾರ್ಯರು ಶಿಷ್ಯನೊಂದಿಗೆ ಪ್ರವೇಶಂ)

ಶಿಷ್ಯಂ॥ ಮಹಾತ್ಮರೆ, ಈ ಸ್ಥಳವು ನಿರ್ಮಲವಾಗಿರುವದು.

ಶುಕ್ರಾ॥ ಈ ಜಲಾಶಯುವು ನಿರ್ಮಲಜಲಪೂರಿತವಾಗಿ ನಮ್ಮ ನಿತ್ಯಕ್ರಿಯಾನುವರ್ತನಕ್ಕೆ ಅನುಕೂಲವಾಗಿರುವದು.

ಶಿಷ್ಯ॥ ಬಹಳ ಚನ್ನಾಗಿರುವದು. ಮಹಾತ್ಮರೆ, ಅತ್ತಕಡೆ ತಮ್ಮ ಮುದ್ದುಕುವರಿಯಾದ ದೇವಯಾನೆಯು ಬರುತ್ತಿರುವಂತಿದೆ.

* ರಾಗ ಮುಹಾರಿ ಅಟತಾಳ (ತರಳನೀನೆಲ್ಲಿಗೆ। ತೆರಳಿದೆ ಪೇಳ್ಕಗೆ ॥)
ಹಾಪಾಪಿಯೆನಿನ್ನ। ಕೋಪಮದೆಷ್ಟೆಲೆ॥ ತಾಪಕೆ ಗುರಿಗೆಯ್ದೆಯಾ। ಏ ಪರಿ ಸಹಿಪೆಂ ॥ ಪಲ್ಲ ॥ ಉರಗಂ ಕಡಿದೊಡೆಬಿಸದ। ಮರಿಚಲ್ಮೃಗಂಗಳಿನಾದ ॥ ಮುರಿಯನಂಟಲ್ ಭಯ। ಮರರೆಸಾಪತ್ನಿಯುಲ್। ಮರೆಯೊಳಿರ್ದೊಡಮುರೆ। ಕರೆ ಕರೆ ಪಡಿಪರೆ ॥ ೧ ॥ ಜಗದೊಳದೆಲ್ಲಿಯುಂ ಕಾಣೆ। ನೆಲೆ। ಕುಗಣೆ ನಿನ್ನಯ ಮತಿಗೆಣೆ॥ ಬಗೆಯೊಳಾಲೋಚಿಸ। ಲಗಣಿತಮಾಗಿದೆ। ಮಿಗೆ ವಾತ್ಸಲ್ಯದೆ ತೊ। ಳ್ಮಗಳಂತೆ ಪೊರೆದೊಡಂ ॥ ೨ ॥

ಶುಕ್ರಾ॥ ಎಲ್ಲಿ ಬರುವಳು?

ಶಿಷ್ಯ॥ ಇತ್ತಕಡೆ ಬರುತ್ತಿರುವಳು.

ದೇವ॥ (ಪ್ರವೇಶಿಸಿ ದೀನತೆಯಿಂದ) ತಾತನೆ! ಕಾಪಾಡು. ಕಾಪಾಡು.

(ಎಂದು ಪಾದದಮೇಲೆ ಬೀಳುವಳು.)

ಶುಕ್ರಾ॥ ಕಂ॥ ಆರಿಂದಾಯ್ತೀ ಬೆಸನಂ।
ಕಾರಣಮಂತಥ್ಯದೊರೆಯೆ ಕಮನೀಯಗುಣೇ॥
ಘೋರಮೆಣಂಗೆಯ್ದನೊ ಪರಿ।
ವಾರದಿನಿಂತಾಯ್ತೊ ನಿನ್ನದಾಸಿಯತಪ್ಪೋ?॥ ೯೪॥

ಹೇಳು ಅವರನ್ನು ತಕ್ಕ ಶಿಕ್ಷೆಗೆ ಗುರಿಪಡಿಸುವೆನು.

ದೇವ॥ ಹಾ ಹಾ! ನನ್ನ ವ್ಯಥೆ ಅಸಾಧಾರಣವಾದುದು.

ಶುಕ್ರಾ॥ ಮಗುವೆ, ಅದೇನು? ಹೇಳುವಳಾಗು?

ದೇವ॥*ವೃ॥ ಪೇಳ್ವೆನದೇನನಾಂ ಜನಿಸಿದಂದಿನ ಹಾ ಬೆಸನಂಗಳಿಂದಮೀ।
ಕೇಳ್ವುದದಾಯ್ತುಕಾಲಮನದೆಂದಿಗೆಕಾಣ್ಬೆನೊಮೋದಲೇಶಮಂ
ಕೇಳ್ವುದುತಾತ! ಭಾಷೆಯನತಿಕ್ರಮಿಸುತ್ತೆದಲೆನ್ನತೊಳ್ತಿನಿಂ।
ತಾಳ್ವನನಂತ ಸಂಮುದಮನುರ್ವಿಪನೇವೆನದೆಂತು ಜೀವಿಪೆಂ ೯೫

ಶುಕ್ರಾ॥ ಎಲಾ ಮಗಳೆ! ಆ ದಾಸಿಯಾವಳು?

ದೇವ॥ ಆ ಅಪಶದೆಯಾದ ಶರ್ಮಿಷ್ಠೆ.

ಶುಕ್ರಾ॥ಕಂ॥ ಸುತೆನೀನೊರೆವುದು ನಿಜಮೇಂ।
ಕ್ಷಿತಿಪತಿಮುಚ್ಚಾಸನಕ್ಕೆ ಪಡಿಯನೊಡರ್ಚಲ್॥

---

* ರಾಗ ತೋಡಿ ಆದಿದಿತಾಳ (ಪಾಡು, ಬಲುಮೋಸಜೇಸನೆ).
ತಾತ, ದಯದೆನ್ನ ಪಾಲಿಸೈ ॥ ಪ ॥ ಪ್ರಿಯ, ನಿಂದ ದು:ಖ ಮೊಂದಿರ್ಪೆನೊ, ತರುಣಾಂಬುಧಿ ಮೌನಿಂದ್ರನೆ ॥ ಅ ॥ ಪುಟ್ಟಿದಂದಿನಿಂ । ಕೆಟ್ಟ ಕಚನೊ । ಿಟ್ಟ ಮನವನೊಂದೆನೊ ॥ ಕೊಟ್ಟಯುಹಸ । ಮ್ಮಿತ್ಟಿಯೂ । ಸುಟ್ಟೊಡಲಿ । ಗಿಟ್ಟಯಾದ । ಳೆನ್ನಪಾಲಿಸೊ ॥ ೧ ॥ ನಿನ್ನನುಜ್ಞೆ । ಯನ್ನು ಮಿಾರಿ । ಗನ್ನಗತಕನಾಗಿತಾಂ ॥ ಎನ್ನಪತಿಯು । ಬನ್ನಪಡಿಸ । ಲಿನ್ನೇವೆನಾ । ಪನ್ನಪಾಲಕ । ಎನ್ನ ಪಾಲಿಸೋ ॥ ೨ ॥

ಮತಿಯೆಂತೊಗೆದುದೊ ಕೆಡುವಾ ।
ಗತಿಯೊಳದೆಂತಿರ್ಕುವಾಹ ಸನ್ಮತಿನರರೊಳ್ ॥ ೯೬ ॥

ದೇವ॥ ಜನಕನೆ, ತಮ್ಮ ಪಾದಂಗಳಾಣೆಯಾಗಿಯೂ ನಾನು ಸುಳ್ಳನ್ನು ಹೇಳುವಳಲ್ಲವು. ಆ ನೀಚಳಿಂದ "ದುಹ್ಯ-ನನು-ಪೂರವ" ಎಂಬ ಮೂವರು ಮಕ್ಕಳನ್ನು ಪಡೆದಿರುವನು.

ಶುಕ್ರಾ॥ (ಮನಸ್ಸಿನಲ್ಲಿ) ಆಹ! ಆ ನೀಚ ನರಪತಿ, ನನ್ನ ಆಜ್ಞಾಭಂಗವನ್ನು ಮಾಡಿರುವುದರಿಂದ ಆತನಿಗನಂತ ದುಃಖ ಪ್ರಾಪ್ತಿಯಾಗುವಂತೆ ಮಾಡಬೇಕಾಗಿದೆ. ಆದರೆ ಅವನಿಗೆ ಎಂತಹ ಸಂಕಟಯುಂಟಾದರೂ ಈ ಸುತೆಗೆ, ತನ್ಮೂಲಕ ನನಗೆ, ಆ ಸಂಕಟ ವಿದ್ದೇ ಇರುವುದು. ಆಗಲಿ. ಈ ರೀತಿಯಾಗಿ ಆತನ ಕೃತಿಗೆ ಪ್ರತಿಫಲವನ್ನು ಅನುಭವಿಸಲಿ. (ಪ್ರಕಾಶಂ)

ಕಂ॥ ಮಗಳೇ ಸತ್ಯಮಿದಾದೊಡ ।
ಮಗಣಿತಕಾಲಂ ಯಯಾತಿ ತಾಳುತೆ ಜರೆಯಂ ॥
ಸೊಗಮನುಭವಿಸಲ್ಕಾರದೆ ।
ಮೃಗದಂತಿರುತಿರ್ಕೆ ಧರೆಯೊಳಿಪ್ಪನ್ನೆವರಂ ॥ ೯೭ ॥

ಎಲೌ ಮಗಳೆ, ಆಜ್ಞಾತಿಕ್ರಮಣಮಾಡಿದ ಫಲವನ್ನು ಅವನೇ ಅನುಭವಿಸಲಿ. ನೀನಿನ್ನು ಸ್ವಸ್ಥಚಿತ್ತಳಾಗು. ದೈವಯತ್ನದಿಂದೊದಗುವ ಸುಖಾಸುಖಂಗಳಿಗೆ ಆರೇನು ಮಾಡಲಿಕ್ಕಾಗುವುದು? ಇನ್ನು ಈ ಆಲೋಚನೆಯನ್ನು ಬಿಡುವಳಾಗು.

ದೇವ॥ ತಾತನನುಜ್ಞೆ. (ಎಂದು ಹೊರಟು ಹೋದಳು.)

ಶುಕ್ರಾ॥ ಎಲೈ ಮಿತ್ರನೆ, ಕಾಲಕ್ರಿಯಾನುವರ್ತನಕ್ಕೆ ಹೊತ್ತಾಯಿತು. ಹೊರಡೋಣ. (ಎಂದು ಹೊರಟು ಹೋಗುತ್ತಿರುವರು).

(ತೆರೆಯಲ್ಲಿ)

ವೃ॥ ನವಿರೆಲ್ಲಂ ನರೆದಿರ್ಪುದಂಗಮುದು ಜಳ್ಳಾಗುತ್ತೆ ಚರ್ಮಂವಿಕಾ ।
ರವನಾಂತಿರ್ಕುಮನಂಗ ಸಂಗತಿಯದೆಲ್ಲಾಂತಿರ್ಕುವೋ ರೂಪುಭಾ ॥
ಸವೆ ಬಿಟ್ಟಿರ್ದುದು ಪಲ್ಗಳಿಲ್ಲಮಿನನೊಳ್‌ನಲ್ಸಪ್ಪುಳುಂ ಕೆಟ್ಟುದೇಂ ।
ತವೆಪೆಂಪೊಂದಿದುದೋ ಮುನೀಂದ್ರನ ಮಹಾತೆಜೋವಿತಾನಂವಲಂ ॥

ಯಯಾತಿ॥ (ಮುದುಕನಾಗಿ, ಪ್ರವೇಶಿಸಿ,) ಹಾಹಾ! ಮಹಾತ್ಮನೆ! ಕ್ಷಮಿಸು. ರಕ್ಷಿಸು.

* ಕಂ|| ಶರಣಾಗತರಂ ಪೊರೆವುದೆ ।
ನರಪತಿಕರ್ತವ್ಯ ಮೆನುತೆ ಪೊರೆಯಲ್ಕವಳಂ ॥
ದುರವಸ್ಥೆಯಿಂತು ಬಂದುದೆ ।
ಗುರುವರ ಕಾಪಾಡು ! ಪಾಡನಾಂಪಡಲಾರೆಂ || ೯೯ ||

ಶುಕ್ರಾ|| ಛೀ! ನೀಚನೆ! ಮದಾಂಧ! ನಾಚಿಕೆಯಿಲ್ಲದೆ ತಪ್ಪನ್ನು ಮರೆಮಾಚಿ ಹೇಳಿಕೊಳ್ಳುವುದಕ್ಕೆ ಬಂದೆಯು? ಛೀ! ನಡೆ.

ಯಯಾತಿ|| ಮಹಾನುಭಾವನೆ, ಆಕೆಯ ಪ್ರಾಣರಕ್ಷಣೆಗಾಗಿಯೇ ನಾನು ಆಕೆಯನ್ನು ಪರಿಗ್ರಹಿಸಿದುದು.

ಶುಕ್ರಾ|| ಛೀ! ನೀಚನೆ, ನಮ್ಮ ಆಜ್ಞಾತಿಕ್ರಮಣವನ್ನು ಮಾಡಿ ಅವಳನ್ನು ಪರಿಗ್ರಹಿಸುವಷ್ಟು ಕಾರ್ಯಗೌರವವೇನಿದ್ದಿತು? ಹೇಳು. ನೀಚನೆ, ಮದಾಂಧನೆ.

ಯಯಾತಿ|| ಮಹಾತ್ಮರೆ, ಲಾಲಿಸಬೇಕು. ನಾನೊಂದು ದಿನ ವನವಿಹಾರಕ್ಕೆ ಹೋಗಿರಲು, ಮಂದಮಾರುತದಿಂದ ಮನಕ್ಕಾನಂದಕರವಾದ ಆ ಸಂಧ್ಯಾಕಾಲದಲ್ಲಿ ಅಲ್ಲೊಂದು ರೋದನವು ಕೇಳ ಬಂದಿತು!

ಶುಕ್ರಾ || ಛೀ! ಮೂರ್ಖನೆ! ಏನೆಂದು ಕೇಳಬಂದಿತು?

ಯಯಾತಿ || ಕಂ || ಪೊರೆವರದಾರಂ ಕಾಣೆಂ ।
ಧರೆಯೊಳಗೀಪ್ರಾಣಮಿರಿಸಿಕೊಂಡಿರ್ದೊಡವೇಂ ||
ನರವರನಂ ಕಾಣಲ್ಕೆನ ।
ಗುರು ಸಹಕರಿಪರನದಾರನರಿಯೆಂ ಹಾ ಹಾ!! ೧೦೦

ಎಂದು ಮೊದಲಾಗಿ;

ಶುಕ್ರಾ || ಆ ಮೇಲೆ?

ಯಯಾತಿ || ಆ ಮೇಲೆ ಆ ಶಬ್ದವುಂಟಾದಕಡೆಗೆ ಹುಡುಕಿಕೊಂಡು ಹೋಗಿ ನೋಡುವಲ್ಲಿ ಒಂದು ಮರದ ಕೊಂಬೆಗೆ ನೇಣನ್ನು ಕಟ್ಟಿ ತನ್ನ

---

* ರಾಗ ಹಿಂದೂಸ್ಥಾನಿ ಕಾಪಿ, ಆದಿತಾಳ ( ಪರಿಪಾಹಿ, ನಂದಗೋಪ ಚಾಲ । ) ಮೌನೀಂದ್ರಪರಿಪಾಲಿಸೆನ್ನಂ ॥ ಪ॥ ಸಕಲನೀತಿಜ್ಞ ನೀ । ನಕಳಂ ಕಚರಿತರ॥ ಪ್ರಕಟಿತ ಮಹಿಮಂ । ಅಕುಟಿಲಮಾನಸಂ ॥ ೧ ॥ ಶರಣಾಗತರನು । ಪೊರೆವುದೆ ಲೋಕದೊಳ್ ॥ ನರಪತಿ ನೀತಿಯೆಂ । ದರಿತಿಂತು ಗೆಯ್ದೆನೊ ॥ ೨ ॥ ಕರುಣಿಸಿ ಮನ್ನಿಸಿ । ತರಳನ ತಪ್ಪನು ॥ ದುರವಸ್ಥೆಯಿಂ ಕಳೆ । ಚರಣಕೆ ವಂದಿಪೆಂ ॥ ೩ ॥

ಕೊರಳಿಗೆ ಆದರವೊನೆಯನ್ನು ತಗಲಿಸಿಕೊಂಡಿದ್ದ ಒಂದು ಸ್ತ್ರೀ ವ್ಯಕ್ತಿಯನ್ನು ನೋಡಿ ಓಡಿ ಹೋಗಿ ಅದನ್ನು ತರಿದು ಬೀಸಾಡಿ ಆಕೆಯೊಡನಿಂತೆಂದೆನು.

ಶುಕ್ರಾ॥ ಛೀ! ಮೂರ್ಖನೆ! ಅವಿವೇಕಿಯೆ! ಏನೆಂದು?

ಯಯಾತಿ॥ಕಂ॥ ಆರಿಂದೇಂ ವ್ಯಥೆಯಡಸಿದು ।
ದೋರಮಣೀಮಣಿಯೆ ಪೇಳದಾರಾದೊಡವಾಂ ॥
ಕಾರುಣ್ಯಮಿರಿಸದವರಂ ।
ಕ್ರೂರತರಂ ಶಿಕ್ಷೆಗೆಯ್ದು ಮುದವೊಂದಿಸುವೆಂ ॥ ೧೦೧ ॥

ಎನ್ನಲು ಆಕೆ ಹೀಗೆ ಹೇಳಿದಳು.

ಶುಕ್ರಾ ॥ ಹೇಗೆ ಹೇಳಿದಳು?

ಯಯಾತಿ॥ ಮಹಾನುಭಾವನೆ, ನೀನು ನನ್ನನ್ನು ಕಾಪಾಡುವೆನೆಂದು ಶಪಥವನ್ನು ಮಾಡಿದರೆ ತನ್ನ ವೃತ್ತಾಂತವೆಲ್ಲವನ್ನು ಹೇಳುವೆನೆಂದು.

ಶುಕ್ರಾ॥ ಆಗ?

ಯಯಾತಿ॥ ನನ್ನ ಧನುಸ್ಸಿನಮೇಲೆ ಆಣೆ ಇಟ್ಟು ಪ್ರಮಾಣವನ್ನು ಮಾಡಿದೆನು. ಆಗ ತಾನು ದೇವಯಾನೆಯ ದಾಸಿಯಾದ ಶರ್ಮಿಷ್ಠೆಯೆಂದೂ, ಕಾಮಬಾಧೆಗೆ ಸಹಿಸಲಾರದೆ ಪ್ರಾಣತ್ಯಾಗಕ್ಕೆ ಉದ್ಯುಕ್ತಳಾಗಿದ್ದೆನದರಿಂದ ಕಾಪಾಡಬೇಕೆಂದು ಹೇಳಿದಳು. ನನಗೆ ಮುಂದೆ ಆವ ರೀತಿ ನಡೆಯಿಸಲಿಕ್ಕೂ ತೋರಲಿಲ್ಲವು. ಆ ಮೇಲೆ ಆಕೆಯ ಇಷ್ಟದಂತೆ ನಡೆಯಬೇಕಾಯಿತು! ಮಹಾನುಭಾವನೆ, ಕರುಣಾರ್ದ್ರ-ಹೃದಯನಾಗು. ದೈವೇಚ್ಛೆಗೆ ನನ್ನ ಯತ್ನವೇನಿರುವುದು?

ಶುಕ್ರಾ॥ ಛೀ! ಹೇಡಿಯೆ ಇದೂ ದೈವೇಚ್ಛೆಯೇ-ಅನುಭವಿಸುವನಾಗು.

ಯಯಾತಿ॥ಕಂ॥ ಪೊಲನಂ ಬೇಲಿಯೆ ಮೇಯಲ್ ।
ವೊಳಕೆಗಳಂ ಧರೆಯೆನುಂಗಲಾರ್ ಪೊರೆದಪರೋ ॥
ಸಲೆ ಕಾಪಾಡುವ ನೀ ಮೆ ।
ನ್ನೊಳೆ ಕೋಪಮನಾನಲೆನ್ನನಾರ್ ಪೋಷಿಪರೋ॥ ೧೦೨

ಮಹಾನುಭಾವ! ಸಂರಕ್ಷಿಸು ರಕ್ಷಿಸು.

ಶುಕ್ರಾ॥ ಛೀ! ಮೂರ್ಖ ಖಂಡಿತವಾಗಿ ಕ್ಷಮಿಸಲಾರೆನು. ನೀನು ಮಾಡಿದ ಕಾರ್ಯಕ್ಕೆ ಪ್ರತಿಫಲವನ್ನು ಅನುಭವಿಸುವನಾಗು.

ಯಯಾತಿ॥ಕಂ॥ ಅರಿಯದೆ ತಪ್ಪಂ ಗೆಯ್ಯಲ್ ।
ತರಳರ್ ತಾಯ್ತಂದೆಗಳ ದಯಾನ್ವಿತರಾಗು ॥
ತ್ರೊರೆಯುತ್ತವರ್ಗೆ ಮತಿಗಳ ।
ಪೊರೆಯದೆ ತಳ್ಳುವರೆ ಕುಳಿಗು ಮರಸನಬಳಿಗುಂ ॥೧೦೩

ಮಹಾನುಭಾವನೆ ನೀನೇ ನಿರ್ದಯೆಯುನ್ನು ಮಾಡಿದರೆ ನನ್ನನ್ನು ಕಾಪಾಡುವ ರಿನ್ನಾರಿರುವರು. ಮೌನೀಂದ್ರ ಕಾಪಾಡು ಕಾಪಾಡು.

ಶುಕ್ರಾ॥ ಎಲೈ! ನೀಚ ನರಪತಿ ನಿನ್ನ ಪತ್ನಿಯಾದ ದೇವಯಾನೆಯು ಅನುರಾಗವನ್ನು ಸಂಪಾದಿಸಿಕೊಂಡು ಬಂದರೆ ಆಗ, ತಕ್ಕ ಉಪಕಾರವನ್ನು ಮಾಡುವೆನು. ಹೊರಟು ಹೋಗು.

ಯಯಾತಿ॥ ಮಹಾತ್ಮರ ಇಷ್ಟದಂತಾಗಲಿ.

( ಎಂದೆಲ್ಲರೂ ಹೊರಟು ಹೋಗುವರು. )

( ಬಳಿಕ ಯಯಾತಿ ಪ್ರವೇಶಿಸಿ )

* ವೃ॥ ನಡುಕಂಪುಟ್ಟಿತು ಕುರ್ಗಿತಂಗಮುಹಹಾ ವಕ್ತ್ರಂ ಮಹಾನೀರಸಂ ।
ಕಡೆವಾಯ್‌ಜೊಲ್ಲುಗುಳ್ದತ್ತು ಕೇಳದಲೆಕರ್ಣಂ ನೇತ್ರಮುಂಕಾಣದೇ ॥
ನಡೆಯಲ್ಕಾಗದುಕಾಲ್ಗಳಿಂ ನರೆತುದೆಲ್ಲಾ ಕೂದಲುಂ ಭಾರ್ಯೆಯುಂ ।
ಕಡೆಗಾಣ್ಬಳ್ ಜರೆಯಾಂತುಜೀವಿಪುದರಿಂ ಸಾವಂದಮೇಸೌಖ್ಯದಂ ॥೧೦೪॥

ಅಹ! ಇನ್ನೇನು ಮಾಡಲಿ? ಆ ಕಠಿಣಾತ್ಮೆಯಾದ ನನ್ನ ಪತ್ನಿಯನ್ನು ಹೇಗೆ ಬೇಡಿಕೊಳ್ಳಲಿ! ಪತಿಗೆ ಹಿತವನ್ನು ಕೋರದಿರುವ ಸತಿಯರಿದ್ದೇನು ಫಲ? ಅಯ್ಯೋ! ಈಗ ನಾನು ಅಂತಹಶಪಥವನ್ನು ಮಾಡುವ ಸಮಯುವಲ್ಲವು! ಹಾಗೇಯೇ ಸರಿ!

ವೃ॥ ಫಣಿಯಾಪುತ್ರದೆಮೇಣ್‌ಗಜಾನನದೆಕೈಯಂಚಾಚುವರ್‌ಧೈರ್ಯದಿಂ ।
ರಣದೊಳ್‌ಪ್ರಾಣದವಾಂಛೆಯಂ ತೊರೆದುಪೊಯ್ದಾಡಲ್ಕುಮುದ್ಯೋಗಿಪರ್ ॥

---

* ರಾಗಸಾವೇರಿ ಆದಿತಾಳ ( ಏನಿದೇನಿದು ಮಾಯುಮಾದುದು ನಾನೇನಮಾಡಿ ದನೋ ) ಎಂತುಸೈಪೆನೊ ಎಂತುಗೆಯ್ವೆನೋ ಮುಂತೋರದಾದುದಹಾ ॥ ಮಂತೆನ್ನದಹುದಹ ॥ ಪ ॥ ಅಂಗವೆಲ್ಲತ । ರಂಗಮಾದುದು । ಭಂಗಮಡಸಿತೆ ಹಾ ॥ ಭಂಗಿಯಿದಪ್ಪದೆ ॥ ೧ ॥ ದಿಡ್ಡನಾದೆನು । ಗುಡ್ಡಿಯಾದೆನು । ದಡಿಗೆ ಯ್ಯನಾದೆನೆಹಾ ॥ ಬಿಡ್ಡೊಗೆದುದೇಹಾ ॥ ೨ ॥ ನಡೆಯಲಾಗದು । ನಡುಕಮ ಪ್ಪುದು । ಜಡತೆಯಾಂತುದೆಹಾ ॥ ಒಡಲಾಶೆಯುಳಿವೆಂ ॥ ೩ ॥

ಉಣಿಸುಂಬೇಡದೆಸೇವೆಗೆಯ್ವರಹಹಾ ಚಂಡಾಲನೊಳ್ ಮಾನಮುಂ ।
ಗಣಿಸರ್‌ತಮ್ಮಯಕಾಂಕ್ಷೆಯಾಂಪವರೆಗುಂ ಕಾರ್ಯಾರ್ಥಿಗಳ್
ಚಿತ್ತದೊಳ್ ॥ ೧೦೫ ॥

ಆದುದರಿಂದ ಪತ್ನಿಯನ್ನಾದರೂ ಪ್ರಾರ್ಥಿಸುವ ವೇಳೆಯಿದು. ಮಹಾತ್ಮರ ಅಜ್ಞೆಯಂತೆ ನಡೆಯುವೆನು ( ಎಂದು ಹೊರಟು ಹೋದನು ).

( ತೆರೆಯಲ್ಲಿ ) ಎಲೌ ಸುಗುಣಿ! ನಿನ್ನ ಇಷ್ಟವನ್ನನುಸರಿಸಿ ನಡೆಯುತ್ತಿದ್ದ ನನ್ನ ಮೇಲೆ ಕೋಪಿಸಿ, ನನಗೆ ಈ ರೀತಿ ದುಃಖವನ್ನುಂಟು ಮಾಡಬಹುದೇ? ಹಾಹಾ!! ಕೆಟ್ಟೆನು! ಕೆಟ್ಟೆನು!! ಇನ್ನೇನುಗತಿ? ದಯಾನ್ವಿತೆಯಾಗಿ ನಿಮ್ಮ ತಂದೆಗೆ ವಿಜ್ಞಾಪಿಸಿ ನನಗೆ ಮೇಲನ್ನುಂಟು ಮಾಡು! ಇಲ್ಲವಾದರೆ ನಿಜವಾಗಿಯೂ ಈ ದೇಹದ ಆಶೆಯನ್ನೇ ತೊರೆದು ನಿನ್ನಿದಿರಿಗೆ ಗತಪ್ರಾಣನಾಗುವೆನು! ಈ ವ್ಯಥೆಯನ್ನು ಸಹಿಸಲಾರೆನು. ಹಾಹಾ!

( ಇಬ್ಬರು ಸೇವಕರು ಪ್ರವೇಶಿಸಿ ).

೧ ನೆಯ॥ ಏನೈ ವಿರೋಚನನೆ ಇಷ್ಟು ಕಾರ್ಯತತ್ಪರನಾಗಿ ಹೋಗುತ್ತಿರುವೆ.

೨ ನೆಯ॥ ಹೋಗಬೇಕು ! ಹೋಗಬೇಕು ಕೆಲಸವಿದೆ.

೧ ನೆಯ॥ ಅದೇನು?

೨ ನೆಯ॥ ನಮ್ಮ ಯಯಾತಿಮಹೀಪತಿ ಶರ್ಮಿಷ್ಠಾದೇವಿಯನ್ನು ವರಿಸಿದುದರಿಂದ, ಆ ಮಹಾಮಾರಿ, ಅಲ್ಲಲ್ಲ, ಅಮಹಾ, ಆ? ಅಮಾತಾಯಿಯಾದ ದೇವಯಾನೆ ಕೋಪಿಸಿಕೊಂಡು ತನ್ನ ತಂದೆಯೊಡನೆ ದೂರನ್ನು ಹೇಳಿ, ನಮ್ಮ ಮಹಾರಾಜನು ವೃದ್ಧತೆಯನ್ನು ಹೊಂದುವಂತೆ ಮಾಡಿದುದು ಕೇಳಿದೆಯೋ ಇಲ್ಲವೋ?

೧ ನೆಯ॥ ಕೇಳಿದ್ದೇನೆ ಮತ್ತೂ ಆತನು ಬಹಳವಾಗಿ ಪ್ರಾರ್ಥಿಸಿದ ಮೇಲೆ ಆಕೆಯ ಅನುಜ್ಞೆಯನ್ನು ಪಡೆದು, ಮಹಾರಾಜನ ಮುಪ್ಪನ್ನು ತನ್ನ ಐವರು ಮಕ್ಕಳಲ್ಲಿ ಆರು ಆನುವರೋ ಅವರಿಗೆ ಈ ಚಕ್ರವರ್ತಿ ಪದವಿಯು ದೊರಕತಕ್ಕುದೆಂದೂ ಆರೂ ಒಪ್ಪದಿದ್ದರೆ ಆ ಮೇಲೆ ತನ್ನ ಬಳಿಗೆ ಬರುವುದೆಂದೂ ಆ ಮಹಾತ್ಮರಾದ ಶುಕ್ರಾಚಾರ್ಯರು ಅಪ್ಪಣೆಕೊಡಿಸಿರುವರಂತೆ?

೧ ನೆಯ॥ ತಮ್ಮ ಮಹಾರಾಜನು ತನ್ನ ಮಕ್ಕಳನ್ನು ಕೇಳಿದನೋ?

೨ ನೆಯ॥ ( ವ್ಯಸನದಿಂದ ) ಕೇಳಿದನು.

೧ ನೆಯ॥ ಆರೂ ಒಪ್ಪಲಿಲ್ಲವೋ?

೨ ನೆಯ॥ ಇದುವರೆಗೆ ನಾಲ್ಕು ಜನದ ಮಾತು ಕಡೆಯಾಯಿತು. ಅವರು ಒಪ್ಪಲಿಲ್ಲವು.

೧ ನೆಯ॥ ಆರಾರು?

೨ ನೆಯ॥ "ಯದು ದುರ್ವಸು ದುಹ್ಯ ನನು" ಎಂಬಿವರು.

೧ ನೆಯ॥ ಇನ್ನು ಕೇಳಬೇಕೆ? ಕಡೆಯುವನಿನ್ನೂ ಹುಡುಗನು ಅವನೊಪ್ಪುವನೇ?

೨ನೆಯ॥ ಹುಡುಗನಾದ ಮಾತ್ರಕ್ಕೇ ಅವನ ಗುಣವೂ ಸಣ್ಣನಾದೀತೆ? ಅವನು ಮಹಾಸದ್ಗುಣಿ "ಬೆಳೆಯುವ ಪೈರು. ಮೊಳೆತಂದೇಗೊತ್ತಾಗುವುದು" ಅಲ್ಲವೆ?

೧ನೆಯ॥ ದೊಡ್ಡವರೆಲ್ಲರೂ ತಿರಸ್ಕರಿಸಿರುವಲ್ಲಿ ಅವನು ಒಪ್ಪುತ್ತಾನೆಯೋ?

೨ನೆಯ॥ ಒಪ್ಪಬಹುದು. ದೊರೆಯು ಆತನನ್ನು ಕರೆದುಕೊಂಡು ಬರುವಂತೆ ನನ್ನನ್ನು ಕಳುಹಿಸಿದನು. ಹೊತ್ತಾಯಿತಪ್ಪ.

(ಎಂದಿಬ್ಬರೂ ಹೊರಟು ಹೋದರು. ಬಳಿಕ ಯಯಾತಿ ಪೂರವನೊಡನೆ ಪ್ರವೇಶಿಸುವನು).

**ಪೂರವ॥** ಜನಕನೆ ವಂದಿಸುವೆನು.

ರಾಜಂ॥ ದೀರ್ಘಾಯುಷ್ಮಂತನಾಗು.

**ಪೂರವ॥** ತಾತನೆ. ನನ್ನನ್ನು ಬರಸಿದ ಕಾರಣವೇನು?

ರಾಜಂ॥ ಕಂ॥ ತನುಜನೆ! ಬರಸಿದಪರಿಯಂ।
ನಿನಗರಿ ಪಲ್ಕೆನಗೆ ಚಿತ್ತವೊಡಬಡದಹಹಾ॥

**ಪೂರವ॥** ತಾತನೆ ಪ್ರೀತಿಪಾತ್ರನಾದ ಪುತ್ರನಿಗೆ ಅಜ್ಞಾಪಿಸುವುದಕ್ಕೆ ಸಂದೇಹವೇನು?

ರಾಜಂ॥ ಎನಗಡಸಿಪ್ಪೀ ಜರೆಯಂ।
ಸ್ವನುಮತದಿಂದಾಂತು ನಿನ್ನ ಹರಯವನೀಯೈ॥ ೧೦೬॥

**ಪೂರವ॥** ತಾತನೆ ಇಷ್ಟೇತಾನೆ? ಇದಕ್ಕಿಷ್ಟು ಯೋಚನೆಯೇ?

ರಾಜಂ॥ ಕಂ॥ ತನಯರ್ಗತಿ ಮುದಮೆಳಪಾ।
ಜನನೀಜನಕರೆ ತನೂಜರಂ ನೋಯಿಸಲಾ॥
ಮನಮೆಂತೊಗೆವುದೊ ತನ್ನವ್ರೊ।
ಲನುವೋದಿಪರುಂಟೆ? ಹಾಹ! ನೀಚಯಯಾತೀ॥೧೦೭॥

ಅಯ್ಯೋ! ಪಾಪಿಯೆ ಏತಕ್ಕೀಜೀವದ ಮೇಲೆ ನಿನಗೆ ಆಶೆ?

(ಎಂದು ನೆಲದ ಮೇಲೆ ಮೂರ್ಛೆಹೊಂದಿ ಬೀಳುವನು).

* ಪೂರವ॥ ಜನಕನೆ ಸಮಾಧಾನವಂತನಾಗು. ನನ್ನಲ್ಲಿ ಕರುಣೆಯಿರಿಸು. ಎಲ್ಲೋ ಹುಟ್ಟಿ ಬೆಳೆದ ಮಿತ್ರರ ಸುಖದು:ಖವೇ ತಮ್ಮದೆಂದು ಸಜ್ಜನರೆಣಿಸುತ್ತಿರುವಾಗ ತಮ್ಮ ಜನ್ಮಕ್ಕೇ ಕಾರಣರಾದ ತಂದೆತಾಯಿಗಳ ಸುಖದು:ಖಗಳನ್ನು ನೋಡಿ ಅವರಿಗೆ ಸಹಾಯಕನಾಗದ ಮನುಷ್ಯನ ಬಾಳೇತರ್ಕೆ?

ಕಂ॥ ಪಿತನೇ ದೈವಂ ನಿಜಗುರು ।
ಪಿತನೇ ಸುಖ ಬುದ್ಧಿದಾಯಕಂ ಗುಣದಾತಂ ॥
ಪಿತನೇ ಸರ್ವ್ಮೋದಕರಂ ।
ಪಿತನೇ ಗತಿ ಯೊವನಲ್ತೆ ತನುಜಂಗಿಳೆಯೊಳ್ ॥ ೧೦೮ ॥

ಜನಕನೇ ನಿನ್ನ ಆಜ್ಞೆಯಾದರೆ ಇದೇ ಅಲ್ಲದೆ ಇನ್ನೂ ಅಸಾಧ್ಯವಾದ ಎಂತಹ ಕಾರ್ಯಂಗಳನ್ನಾದರೂ ಮಾಡಬಲ್ಲೆನು. ನನ್ನ ಮನ:ಪೂರ್ವಕವಾಗಿ ನಿನ್ನ ಇಷ್ಟದಂತೆ ಅನುವರ್ತಿಸುವೆನು.

ಯಯಾ॥ವೃ॥ ನೀನಲೆಪುತ್ರ ನೆನ್ನಸುತರೈವರೊಳಾಂತೆಯನಂತ ಕೀರ್ತಿಯಂ।
ನೀನಲೆ ಪುತ್ರವಂತನೆನುವಂತೆನಗಾಗಿಸಿದೈ ಜನಾಳಿಯೊಳ್
ನೀನಲೆ ಚಂದ್ರವಂಶತಿಳಕಂ ಚರಿತೇರಿತ ಪಾಪಸಂಚಯಂ ।
ನೀನಲೆ ಬಂಧುವರ್ಗಕತಿಸಮ್ಮುದದಾಯಕ ನಾರ್ಯ
ವಂದಿತಂ ॥ ೧೦೯ ॥

---

* ರಾಗ ಜಂಜೂಟಿ ಆದಿತಾಳ ಸರಸಿಜಾ ಲೋಚನೆಯಳೆ ನಾಂ ಪೋಗಿಬರ್ಪೆನೆ ॥ ಜನಕ ನಿನ್ನ ಮನದ ವ್ಯಥೆಯನುಳಿಯಿನ್ನು ನೀಂ ॥ ತನಯನಾಗಿ ಮನಕೆಮುದವನು ಕೊಡದಿರೆಂ ॥ ಪ ॥ ಮೊಳೆವುದೆಲ್ಲೋ ಬೆಳೆವುದೆಲ್ಲೊ ಜಳರುಹಂಗಳು ॥ ಗೆಳೆಯನಿಂದಸಲೆ ಸಮ್ಮುದವ ನೊಳಗೊಳ್ಳದೆ ॥ ೧ ॥ ನಿನ್ನ ಪುತ್ರನೆನ್ನಿಸಿ ಮುದವನ್ನೆಸಗದೆ ॥ ಸನ್ನುತನೆಂದೆನ್ನಿಸುವೆನೆ । ಖಿನ್ನತೆಯುಳಿಯೈ ॥ ೨ ॥

§ ರಾಗ ಕಾಂಬೋದಿ, ಆದಿತಾಳ (ನಿನ್ನೇನಮ್ಮಿನಾರ । ನೀರಜನಯನಂ) ನೀನೆಯೆನ್ನಪುತ್ರ । ನೀನೆ ಪ್ರೀತಿಪಾತ್ರ ॥ ನೀನೆ ಸಚ್ಚರಿತ್ರ । ನೀನತಿ ಪವಿತ್ರ ॥ ಪ॥ ಮಕ್ಕಳೈವರಿಂದೆ । ಲೆಕ್ಕಿಸಲ್ಕರ್ಹನೋ ॥ ಕಕ್ಕುಲಿತೆಕಳೆದೈ ಚಿಕ್ಕವನಾದೊಡಂ ॥ ೧ ॥ ಜಗದೆ ನಿನ್ನ ಕೀರ್ತಿ । ಪಗಲಿರುಳೆನ್ನದೆ ॥ ಆಗಣಿತ ಮಾಗಿರ್ಕೆ । ನಗನಿರ್ಪನ್ನೆಗಂ ॥ ೨ ॥

ಮಗನೆ ನಿನ್ನಿಂದ ನಾನು ಧನ್ಯನಾದೆನು. ಮತ್ತೂ ಮಾನ್ಯನೂ ಆದೆನು. (ತೆರೆಯಲ್ಲಿ) ವೃ॥ ಮಾರಸಮಾಂಗ ಪೂರವ ಕುಮಾರಕನಾಂತನನಂತ ಕಷ್ಟಮಂ।

ಸೈರಿಸಲಾರೆ ನೀಕ್ಷಿಸುತಲಾನೆನುತಂ ರವಿ ಪಶ್ಚಿಮಾಬ್ಧಿಯೊಳ್॥
ಜಾರಿದ ನಂಬುಜಾಳಿ ಕೊರಗಿತ್ತು ಪಿಕಾದಿವಿಹಂಗ ಸಂಚಯಂ।
ಪಾರತುಮಿರ್ಪುವಾತ್ಮನಿಲಯಂಗಳನಾರಿಸುತಪ್ಪರಾತ್ರಿಯಿ ೧॥೧॥

ರಾಜಾ॥ ಕೇಳಿ ಪಡುನೇಸರಾದಂತಿದೆ. ನಿತ್ಯ ಕರ್ಮವನ್ನು ಅನುವರ್ತಿಸುವದಕ್ಕೆ ಹೋಗೋಣ (ಎಂದೆಲ್ಲರೂ ಹೊರಟು ಹೋದರು.)

(ಬಳಿಕ ಇಬ್ಬರು ಬ್ರಾಹ್ಮಣ ಕುಮಾರರು ಬರುವರು.)

೧ನೆಯ॥ ಏನಯ್ಯಾ ಭೀಮ, ಆಚಾರ್ಯನೋ? ಭಟ್ಟನೋ? ಏನು? ನಿನ್ನ ಮುಖ ನೋಡಿದರೆ ಹೇಗೂ ನಿರ್ಧರಿಸುವುದಕ್ಕಾಗುವುದಿಲ್ಲವು.

೨ನೆಯ॥ ಅದು ಹೇಗೆ?

೧ನೆಯ॥ ಗೋಪೀಚಂದನದಿಂದ ಲಕ್ಷಣವಾಗಿ ಊರ್ಧ್ವಪುಂಡ್ರವನ್ನು ಹಣೆಯಲ್ಲಿ ತಿದ್ದಿರುವಿ. ವಿಭೂತಿಯೋ ನಿನ್ನ ಅಂಗಗಳ ಮೇಲೆತಾನೇತಾನಾಗಿ ತಾಂಡವವಾಡುತ್ತಿರುವುದು. ಕೊರಳಿನಲ್ಲಿ ಯಜ್ಞೋಪವೀತದ ಹೊರತು ಏನೂ ಇಲ್ಲದುದರಿಂದ ಹಾಗೆ ಹೇಳಿದೆನು. ನಿಮ್ಮ ತಂದೆಯು ಹೆಸರೂ ನನಗೆ ಗೊತ್ತಿಲ್ಲವು.

೨ನೆಯ॥ನಮ್ಮ ತಂದೆಯುವರು ಕಾಶಿಗೆ ನಾಲ್ಕೈದುಬಾರಿ ಹೋಗಿದ್ದರು. ಐವತ್ತುಸರ ರುದ್ರಾಕ್ಷಿಗಳನ್ನು ತಂದಿದ್ದಾರೆ. ಭಂಗಾರದ ತಂತುವಿನಿಂದ ಸುತ್ತಲ್ಪಟ್ಟ ಪ್ರವಾಳಾದಿಗಳಿಂದ ಕೂಡಿರುವ ಎರಡು ಮೂರು ಅಮೂಲ್ಯವಾದ ಸರಗಳೂ ಇವೆ. ಅವನ್ನು ಧರಿಸುವದಕ್ಕೆ ನನಗೆ ಇಷ್ಟವಿಲ್ಲವು.

೧ನೆಯ॥ಏಕೆ? ಆರಾದರೂ ಕಳ್ಳರು ಕಿತ್ತುಕೊಂಡಾರೆಂಬ ಭಯವೋ?

೨ನೆಯ॥ಅಲ್ಲವಯ್ಯ! ಅವೆಲ್ಲಾ ಡಾಂಭಿಕಚರ್ಯೆಗಳು. ಅವುಗಳನ್ನು ಅಲಂಕಾರಕ್ಕೋಸ್ಕರ ಧರಿಯಿಸಬೇಕೇ ಹೊರತು ದೇವರ ಅನುಗ್ರಹವು ಅವುಗಳನ್ನು ಧರಿಯಿಸುವದರಿಂದ ಉಂಟಾಗುವುದೇ ನೀನೇ ಹೇಳು? ಸಾಮಾನ್ಯವಾಗಿ ಲೋಕರು ನಮ್ಮ ಐಶ್ವರ್ಯಕ್ಕೋಸ್ಕರವಾಗಿಯೋ? ನಮ್ಮ ಸದ್ಗುಣಕ್ಕೋಸ್ಕರವಾಗಿಯೋ? ಅವರ ಮನಃಪೂರ್ವಕವಾಗಿ ನಮ್ಮನ್ನು ಶ್ಲಾಘಿಸುವದು?

೧ನೆಯ॥ ಅಹುದು! ಈಗ ನೀನು ಭೀಮಪಂಡಿತನೆಂದು ಹೇಳುತ್ತೇನೆ! ಪಂಡಿತನೆಂದರೆ ವೈದ್ಯನಿಗೆ ಅನ್ವಯಿಸುವುದೆಂದು ಹೇಳಬೇಡ! "ಸರ್ವಜ್ಞ ಅಥವಾ

ಅಭಿಜ್ಞ"! ಎಂಬುದೇ ನನ್ನ ಅಭಿಪ್ರಾಯವು! ಅದೆಲ್ಲಾ ಹಾಗಿರಲಿ! ನೀನು ಎಲ್ಲಿಗೆ ಹೊರಟಿರುವೆ?

೨ನೆಯ॥ ನಮ್ಮ ಗುರುಗಳ ಮನೆಗೆ!

೧ನೆಯ॥ ಏತಕ್ಕೆ?

೨ನೆಯ॥ ನಾಳೆಯದಿನ ಮಹಾರಾಜಕುಮಾರನಾದ ಪೂರವರಾಜನಿಗೆ ಪಟ್ಟಾಭಿಷೇಕ ವಂತೆ! ಇದೋ ನೋಡು. ಎಲ್ಲಿನೋಡಿದರೂ ಮಕರತೋರಣಗಳು. ದೀಪೋತ್ಸವಸಂಭ್ರಮಗಳು. ಅಲಂಕಾರಯುಕ್ತಂಗಳಾದ ಚಪ್ಪರಂಗಳು. ಸಮಾರಾಧನೆಗೆ ಆಗಬೇಕಾದ ಪರಿಕರಂಗಳನ್ನು ಹವಣಿಸುವಿಕೆ! ನಿನಗೆ ಗೊತ್ತಿಲ್ಲವೆ?

೧ನೆಯ॥ ಅದಕ್ಕೇ ಆಗಬಹುದು. ನಮ್ಮ ಗುರುಗಳು ನನಗೂ ಹೇಳಿಕಳುಹಿಸಿ ಇದ್ದರು. ಇವರೆಲ್ಲರೂ ಋತ್ವಿಜರಾಗುವರೋ?

೨ನೆಯ॥ ನವಗ್ರಹಜಪ, ಸೂರ್ಯಪ್ರಾರ್ಥನೆ ಮೊದಲಾದ ಶಾಂತಿಕ್ರಿಯೆಗಳಾಗಬೇಕಷ್ಟೆ? ಅವುಗಳನ್ನು ಮಾಡತಕ್ಕವರು;

೧ನೆಯ॥ ಒಳ್ಳೆಯದು. ಪೂರವಕುಮಾರನಿಗೆ ಆತನ ತಂದೆಯು ವೃದ್ಧತೆಯನ್ನು ಕೊಟ್ಟು ತಾನು ಆತನ ಪ್ರಾಯವನ್ನು ವಹಿಸಿದನೆಂದು ಹೇಳುತ್ತಿದ್ದರು. ಆಮುದುಕನಿಗೇ ಪಟ್ಟಾಭಿಷೇಕವನ್ನು ಮಾಡುವರೋ?

೨ನೆಯ॥ ಆ ಸರ್ವಜ್ಞನಾದ ದೊರೆಯು ಅಸ್ಥಿರವಾದ ಈ ದೇಹದ ಮಮತೆಯನ್ನು ಬಿಟ್ಟು ತನ್ನ ಕುವರನ ಸುಖವನ್ನು ಕೋರಿದವನಾಗಿ ಮೊದಲಿನಂತೆ ಆತನ ಪ್ರಾಯವನ್ನು ಆತನಿಗೆ ಕೊಟ್ಟು ನಾಳೆಯದಿನ ಸಾರ್ವಭೌಮ ಪದವಿಯ ಪಟ್ಟಾಭಿಷೇಕವನ್ನು ಮಾಡಲೆಳಸಿರುವನು.

೧ನೆಯ॥ ಮಗನಿದ್ದರೆ ಪೂರವನಂತಹವನಿರಬೇಕು. ಎಷ್ಟು ಜನರಿದ್ದರೇನು ?

೨ ನೆಯ ॥ ಹೊತ್ತಾಯಿತಪ್ಪ! ನಾನು ರಾಜಭಟರನ್ನು ಕರೆದುಕೊಂಡು ಬ್ರಹ್ಮಶ್ರೀ ಶುಕ್ರಾಚಾರ್ಯರ ಬಳಿಗೆ ಆಹ್ವಾನ ಪತ್ರಿಕೆಯನ್ನು ತೆಗೆದು ಕೊಂಡು ಹೋಗಬೇಕು. ( ಎಂದು ಹೊರಟು ಹೋದರು. )

( ತೆರೆಯುಲ್ಲಿ ).

ವೃ॥ ಸಾರಗುಣಾನ್ವಿತಂ ಜನಪನಾತ್ಮಜಪೂರವಗಿತ್ತ ಪಟ್ಟದಿಂ ।
ಧಾರಿಣಿಯೆಲ್ಲಮುಂ ತಳೆವಮೋದಕೆ ತಾಂ ಸಹಕಾರಿಯಪ್ಪೆನಂ ॥

ದಾರವಿ ಮೂಡಲಲ್ಲೊಗೆವ ಮುನ್ನಮೆ ಬಂದನೊ ಸೂತನೆಂಬವೊಲ್।
ತೋರಿತುಕೆಂಪದೇನೊ? ಸುಜನರ್ಪರವೋದದೊಳಾಂಪರುಕ್ಕೆವಂ ॥೧೧೧॥

(ಆಸ್ಥಾನದಲ್ಲಿ ವೃದ್ಧನಾದರಾಜನು ಮಂತ್ರಿ ಋಷಿಗಳು ಪೂರವಸಹಿತನಾಗಿರುವನು).

ರಾಜಂ॥ ಮಹಾತ್ಮರೆ. ಶುಭಲಗ್ನವು ಸಮೀಪಿಸಿತು. ಮುಂದಣಕಾರ್ಯಂಗಳು ನಡೆಯಬಹುದಲ್ಲವೆ?

ಪುರೋ॥ ಮಹಾರಾಜನ ಸಂತೋಷವು. ಮಹಾತ್ಮರುಗಳಿರಾ! ಶುಭಕಾಲದಲ್ಲಿ ಮಂಗಳದೇವತಾಧೀಶನಾದ ಶ್ರೀ ನಿವಾಸನನ್ನು ಸ್ಮರಿಸಿ ಮಂಗಳವನ್ನು ಹೇಳೋಣ.

ಎಲ್ಲರೂ॥ ಮಹಾತ್ಮರ ಅಪ್ಪಣೆ!

*ವೃ॥ ಶ್ರೀಲಕ್ಷ್ಮೀಭೂಷಿತಾಂಗಂ ಶ್ರಿತಜನದುರಿತಧ್ವಾಂತಭಾಸ್ವಂತನಾಢ್ಯಂ।
ತ್ರೈಲೋಕ್ಯೋತ್ಪತ್ತಿ ಬೀಜಂಸ್ವಲಕಪುರವರಂ ವಾರಿಜಾಪ್ತಾಬ್ಜನೇತ್ರಂ॥
ಕಾಲಾರಾತೀಂದ್ರಪದ್ಮೋದ್ಭವಮುಖಸುರಸಂಸ್ತೂಯಮಾನಾಂಘ್ರಿಪದ್ಮಾ।
ಲೋಲಂ ಶ್ರೀವೇಂಕಟೇಶಂ ಪೊರೆಗೆ ಕರುಣದಿಂ ಪೂರವೋರ್ವೀಶನಂತಾಂ ॥ ೧೧೨ ॥

ಶುಕ್ರಾ॥ ಮಹಾತ್ಮನಾದ ಯಯಾತಿ ಮಹೀಪತಿಯೆ! ಈ ಸಂತೋಷಸಮಯದಲ್ಲಿ ನಿನ್ನ ಅಭೀಷ್ಟವಿನ್ನೇನುಂಟು? ಹೇಳು! ಉಂಟು ಮಾಡುವೆನು. ಈ ಮಹಾತ್ಮನಾದ ಈ ಪೂರವಕುಮಾರನಿಂದ ನಿನ್ನ ವಂಶವು ಸುಪ್ರಸಿದ್ಧವಾದುದು.

ಯಯಾತಿ॥ವೃ॥ಪಟ್ಟೆನನಂತಸೌಖ್ಯಮಿದೊತಮ್ಮಯಪುತ್ರಿಯಿನೀಸುಪುತ್ರನಿಂ
ಕೊಟ್ಟೆನಿಳಾಮರರ್ಗೆಬಹುಗೋಧನವಸ್ತುಗಳಂ ಪ್ರಮೋದದಿಂ ॥
ಅಟ್ಟಿದೆನೆಲ್ಲವೈರಿಕುಲಮಂ ಧರಿಸಿರ್ದುಸಿ ತಾತಪತ್ರಮಂ।
ಪಟ್ಟವನಾಳ್ದನೀಮಗುಗೆ ಕಟ್ಟಿದೆನಾಳ್ಕೆಯವಾಂಛೆಯಿನ್ನದೇಂ॥೧೧೩॥

* ರಾಗಸುರಟಿ, ರೂಪಕತಾಳ (ನಾಗವೇಣೀನಗರಿಗೆನಾಂ ಪೋಗಿಬರುವೆನೆ॥) ಮಂಗಳವನೀಯೊಡೇವ। ಮಂಗಳಾಭಿಧ ॥ ಪ ॥ ಅಂಗಜಪಿತ, ಶೃಂಗಿಧರಕುರಂಗಲೋಚನ ॥ ರಂಗಗುಣೋ, ತ್ತುಂಗದುರಿತ, ಭಂಗಪಾವನ ॥ ೧ ॥ ಸೃಷ್ಟಿಸ್ಥಿತಿ ಲಯಕರ್ತ, ಇಷ್ಟರೂಪನೇ ॥ ವಿಷ್ಟಪೇಶದಯದೆ ಪೊರೆಸ್ರಷ್ಟಜನಕನೆ ॥ ೨ ॥ ಜಲಜನಾಭ, ಅಲಕನಗರ, ನಿಲಯವೇಂಕಟ ॥ ಸಲೆಕೃಪೆ, ಯೊಳೆನತರ, ಸಲಹುಸಂತತಂ ॥ ೩ ॥

ಆದರೂ ಮಹಾತ್ಮರು ಅನುಗ್ರಹಿಸುವುದಾದರೆ ಈ ಭರತವಾಕ್ಯವು
ಲ್ಪಡಲಿ.

ವೃ॥ ಧರೆಯಂ ಪಾಲಿಕೆ ಧರ್ಮದಿಂ ಜನಪರೆಂದುಂ ಗೆಲ್ವನಾಂತೇಗಳುಂ
ಧರಣೀದೇವರು ಮತ್ತೆಧೇನುಗಣಮುಂ ಸಂತೋಷಮೊಂತಿರ್ಕೆಮೇಣ್ ॥
ಹರಿನಾಮಾಮೃತಮೊಂಟುತಂಸಕಲರುಂಸಮ್ಮೋದಮಂತಾಳ್ಗೆ ತಾಂ ।
ಮೆರೆದಿರ್ಕೆಕೃತಿಭೂಮಿಯೊಳ್‌ರಸಯುತಂಚಂದ್ರಾರ್ಕರುಳ್ಳನ್ನೆಗಂ॥೧೧೪॥

ಶುಕ್ರಾ॥ ತಥಾಸ್ತು!

( ಎಂದೆಲ್ಲರೂ ಹೊರಟು ಹೋದರು. )

ಪಂಚಮಾಂಕಂ ಮುಗಿದುದು.

ಇತಿಯಯಾತಿನಾಟಕ ನಿರ್ವಹಣಂ

ಶ್ರೀರಾಮಾರ್ಪಣ ಮಸ್ತು

ಸ್ವಸ್ತ್ಯಸ್ತು.

ಶ್ರೀರಾಮಂ

ಕಂ॥ ಹರಿತಸಗೋತ್ರದೊಳೊಗೆದಾ ।
ವರವೇಂಕಟಸುಬ್ಬಯಾರ್ಯರಾತ್ಮಜನಮಲಂ ॥
ವಿರಚಿಸಿದನೀ ಯಯಾತಿಯ ।
ಚರಿತೆಯನಾಟಕಮನಿಂತು ವೇಂಕಟರಮಣಂ ॥ ೧೧೫ ॥

